# ಶ್ರೀ. ಸ್ಯಮಂತಕೋದ್ಧರಣ

ಲೇ: ಎಂ. ಆನಂದರಾವ್



ವಿವೇಕ ಸಾಹಿತ್ಯಮಾಲೆ
ಮಂಗಳೂರು 1954

ABKrishnaRaja
29.12.54

ರುಷ ೩ ಕುಸುಮ ೧೫

No 28.

# — ಸಂಶೋಧನೆ —



ಪ್ರಕಾಶಕರು:

ವಿವೇಕ ಸಾಹಿತ್ಯ ಮಾಲೆ

ಮಂಗಳೂರು - 3

ಅಕ್ಟೋಬರ ೧೯೫೪

ಮುಖಚಿತ್ರ—ಮುರಲೀಧರ್, ಮಂಗಳೂರು.
ಪಡಿಯಚ್ಚು—ಶಾರದಾ ಛಾಪಖಾನೆ, ಮಂಗಳೂರು.



ಬೆಲೆ: ೦—೮—೦



—: ಅಧಿಕೃತ ಮಾರಾಟಗಾರರು :—

1. ಜೆ. ನನುಮಲ್ ಅಂಡ್ ಸನ್ಸ್, ಮೈಸೂರು.
2. ನ್ಯೂಸ್ ಪೇಪರ್ ಹೌಸ್, ಮೈಸೂರು.
3. ಕೆ. ಜಿ. ಎಮ್. ಬಸವಣ್ಣಯ್ಯ,
   ಜೀವನ ಸಾಹಿತ್ಯ ಪುಸ್ತಕಾಲಯ, ಮಂಡ್ಯ.
4. ಜೋಯಿಸ್ ಎಂಡ್ ಕಂಪೆನಿ, ತಿಪಟೂರು.
5. ಎ. ಎಚ್. ರಾಮಸ್ವಾಮಿ, ಬುಕ್‌ಸೆಲ್ಲರ್, ಚಿಕ್ಕಮಗಳೂರು.
6. ಸಾಹಿತ್ಯ ಭಾಂಡಾರ, ಹುಬ್ಬಳ್ಳಿ.

ಮುದ್ರಕರು:
ಸಿದ್ಧಾರ್ಥ ಮುದ್ರಣಾಲಯ,
ಮಂಗಳೂರು.

ಸಂಪಾದಕ:
ರಾಮ ನೊಳೆಯಾರ, ವಿದ್ವಾನ್,
ಮಂಗಳೂರು.

# ಎರಡು ಮಾತು

ಈ ವರುಷದ ಐದನೆಯ ಕುಸುಮವಾಗಿ ಶ್ರೀ. ಎಂ. ಆನಂದರಾಯರ ಸುಂದರ ನಾಟಕ "ಸಂಶೋಧನೆ"ಯನ್ನು ನಮ್ಮ ವಾಚಕರ ಮುಂದಿಡಲು ಸಂತೋಷಪಡುವೆವು.

ಶ್ರೀಯುತ ಎಚ್. ಬಸವಣ್ಣಪ್ಪ ಹರಪನಹಳ್ಳಿ ಇವರು ಶ್ರೀ. ಎಂ. ಆನಂದರಾಯರಿಂದ ಪಡಕೊಂಡ ಈ ಪುಸ್ತಕವನ್ನು ನಮ್ಮೀ ಸಾಹಿತ್ಯ ಮಾಲೆಯಲ್ಲಿ ಪೋಣಿಸಲು ಅನುಮತಿಯಿತ್ತುದಕ್ಕಾಗಿ ಅವರಿಗೆ ಋಣಿಗಳಾಗಿರುವೆವು.

ಅಂದವಾಗಿ ಮುದ್ರಿಸಿ ಕೊಟ್ಟ ಸಿದ್ಧಾರ್ಥ ಪ್ರೆಸ್ಸಿನ ಮಾಲಕರಾದ ಶ್ರೀ. ಶ್ರೀನಿವಾಸ ಉಪಾಧ್ಯಾಯರಿಗೂ, ಸುಂದರ ಮುಖಚಿತ್ರ ಬರೆದು ಕೊಟ್ಟ ಗೆ॥ ಮುರಲೀಧರರಿಗೂ, ಪಡಿಯಚ್ಚು ತಯಾರಿಸಿಕೊಟ್ಟ ಶಾರದಾ ಛಾಪಕಾನೆಯವರಿಗೂ ಸಾದರ ವಂದನೆಗಳು.

ನಮ್ಮ ವಾಚಕ ವೃಂದಕ್ಕೆ ಋಣಿಗಳು.

**ಸಂಪಾದಕ.**

## ವಿವೇಕ ಸಾಹಿತ್ಯಮಾಲೆ, ಮಂಗಳೂರು-೩.

# ನಮ್ಮ ಪ್ರಕಟಣೆಗಳು

| | | | | | | |
|---|---|---|---|---|---|---|
| 1. | ವಿಶ್ವಪ್ರೇಮಿ | ರಾ. ಮೊ. ವಿಶ್ವಾಮಿತ್ರ | (ದ್ವಿತೀಯ ಮುದ್ರಣ) | 1—8—0 | ಪುಟ | 148 |
| *2. | ಕುಟ್ಟಿದೊಣ್ಣೆ | ಎಮ್. ಸುಬ್ಬಾಯನ್ | (ಕಥಾಸಂಕಲನ) | 0—8—0 | ,, | 66 |
| *3. | ಸ್ವರ್ಗಲೋಕ | ಎಮ್. ಕೆ. ಭಟ್ | (ನಾಟಕ) | 0—4—0 | ,, | 25 |
| *4. | ತಿಳಿವಿನಹಾದಿ | ರಾ. ಮೊ. ವಿಶ್ವಾಮಿತ್ರ | (ಕಾದಂಬರಿ) | 0-12—0 | ,, | 135 |
| *9. | ದೇವರದಾರಿ | ಸೇವ ನಮಿರಾಜಮಲ್ಲ | (ಕಾದಂಬರಿ) | 1—4—0 | ,, | 176 |
| 6. | ಮಣ್ಣಿನಂಜು | ಎಮ್. ಎನ್. ಭಟ್ | (ಕಾದಂಬರಿ) | C-14—0 | ,, | 87 |
| 7. | ಬೇನೆಯಬಾಳ್ವೆ | ರಾ. ಮೊ. ವಿಶ್ವಾಮಿತ್ರ | (ಕಾದಂಬರಿ) | 1—8—0 | ,, | 340 |
| 8. | ಪುರಸ್ಕಾರ | ಗಣಪತಿ ಮೊಳೆಯಾರ | (ಕಾದಂಬರಿ) | 0—8—0 | ,, | 89 |
| 9. | ಭ್ರಾಂತಿಯ ಸುಳಿಯಲ್ಲಿ | ಎಮ್. ಎನ್. ಭಟ್ | (ಕಾದಂಬರಿ) | 0-12—0 | ,, | 138 |
| 10. | ಚೆಂದಜೀವಿ | ಪಂ. ಮೂ. ರುದ್ರಮುನಿಸ್ವಾಮಿ | (ಕಾದಂಬರಿ) | 0-12—0 | ,, | 164 |
| 11. | ಸಮಾಜದರ್ಶನ | ಇಂದಿರಾತನಯ | (ಕಾದಂಬರಿ) | 0—8—0 | ,, | 112 |
| 12. | ಹೃದಯ ವೀಣೆ | ಮ. ವಿ. ನಾಯಕ್ | (ಕಥಾಸಂಕಲನ) | 1—0—0 | ,, | 125 |
| 13. | ತ್ಯಾಗಮಯಿ | ರಾ. ಮೊ. ವಿ. | (ಕಾದಂಬರಿ) | 0—4—0 | ,, | 218 |
| 14. | ಮೊದ್ದುಮಗು | ನವಗಿರಿನಂದ | (ಕಾದಂಬರಿ) | 0-12—0 | ,, | 121 |
| 15. | ಸಂಶೋಧನೆ | ಆನಂದರಾವ್ ಎಂ. ಎ. | (ನಾಟಕ) | 0—8—0 | ,, | 84 |

ಸಾಹಿತ್ಯ ಮಾಲೆಯ ವಾರ್ಷಿಕ ಚಂದಾ ಅಂಚೆವೆಚ್ಚ ಸಹಿತ ರೂಪ್ಯಾ 6 ಮಾತ್ರ. ಪುಸ್ತಕದ ಮುಖಬೆಲೆ M. O. ದ್ವಾರಾ ಕಳುಹಿಸಿದವರಿಗೆ ನಮ್ಮ ವೆಚ್ಚದಲ್ಲಿ ಪೋಸ್ಟಲ್ ಸರ್ಟಿಫಿಕೇಟ್ ಪಡೆದು ಪುಸ್ತಕ ಕಳುಹಿಸಿಕೊಡುವೆವು. ರಿಜಿಸ್ಟರ್ ದ್ವಾರಾ ಅಪೇಕ್ಷಿಸುವವರು ಆರಾಣೆ ಅಧಿಕ ಕಳುಹಿಸಿಕೊಡಬೇಕು.

*ಪ್ರತಿಗಳು ತೀರಿವೆ.

## ಮುಂದಿನ ಕುಸುಮಗಳು

ರಕ್ತದಾನ (ಕಾದಂಬರಿ)— ರಾ. ಮೊ. ವಿಶ್ವಾಮಿತ್ರ

ಕಾಳಿಗೆ ಕಾಣಿಕೆ (ಕಥಾಸಂಕಲನ)— ಕೈಂತಜೆ ಗೋವಿಂದ ಭಟ್

---

## ತಪ್ಪೊಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| 8 | 3 | ತಿಳಿದ್ದಾಂಗೆ | ತಿಳೀದ್ದಾಂಗೆ |
| 8 | 20 | ನನ್ನಾಗ್ಲೆ | ನನ್ಗಾಗ್ಲೆ |
| 9 | 18 | ಹೋಗೇವೆ | ಹೋಗ್ತೇವೆ |
| 50 | 20 | ಪೂಜೆ | ಪ್ರಜೆ |
| 61 | 22 | ಧ್ವಾರಪಾಲಕ | ದ್ವಾರಪಾಲಕ |
| 62 | 16 | ಸ್ಪಲ್ಪ | ಸ್ವಲ್ಪ |
| 70 | 24 | ನಂದ | ಆನಂದ |
| 73 | 23 | ಜಯಸಿ | ಜಯಿಸಿ |
| 74 | 10 | ದುರ್ಮಾಗ | ದುರ್ಮಾರ್ಗ |
| 75 | 24 | ವ್ಯರ್ಥಲಾಪ | ವ್ಯರ್ಥಾಲಾಪ |
| 81 | 18 | ತದಾತ್ಮನಂ | ತದಾತ್ಮಾನಂ |
| 82 | 5 | ವಿಷ್ಣುವೇ | ವಿಷ್ಣವೇ |

# ಪಾತ್ರಗಳು:

1. ಯಮಧರ್ಮ — ಸಂಶೋಧಕ.
2. ಆಚಾರ್ಯ — ಭೂಸುರೋತ್ತಮ.
3. ಶಂಕರ — ಕೈಲಾಸಪತಿ.
4. ಚಿತ್ರಗುಪ್ತ — ಯಮಧರ್ಮನ ಮಂತ್ರಿ.
5. ಚಂಡ }
6. ವಿಕ್ರಮ } ಯಮಧರ್ಮನ ಭೃತ್ಯರು.
7. ಸೇನಾಪತಿ — ಯಮಧರ್ಮನ ದಳಪತಿ.
8. ಮತ್ತು 9. ದ್ವಾರಪಾಲಕರು.
10. ಪುಟ್ಟು — ಆಚಾರ್ಯರ ಮಗ
11. ಸೇವಕ
12. ಹನುಮಣ್ಣ }
13. ರೈತ } ಭೂಲೋಕದ ರೈತರು
14. ಪಾರ್ವತಿ — ಶಂಕರನ ಅರ್ಧಾಂಗಿ
15. ಯಂಕಮ್ಮ — ಆಚಾರ್ಯರ ಹೆಂಡತಿ.
16. ಭಾಗೀರತಿ ಬಾಯಿ— ಯಂಕಮ್ಮನ ನೆರೆಹೊರೆಯ ಮುದುಕಿ.

# ಸಂಶೋಧನೆ



## ಮೊದಲನೆಯ ಅಂಕ

### ದೃಶ್ಯ ೧

[ಯಮಧರ್ಮನ ಮರಣ ಕಚೇರಿ. ಚಂಡ ವಿಕ್ರಮರೆಂಬ ಇಬ್ಬರು ಚಾರರು ಪರಾಕು ಹೇಳುತ್ತಿರಲಾಗಿ ಗಂಭೀರಭಾವದಿಂದ ಯಮಧರ್ಮನು ಪ್ರವೇಶಿಸುವನು.]

**ಚಂಡ ವಿಕ್ರಮ** } ಶ್ರೀ ಮನ್ಮಹಾರಾಜಾಧಿರಾಜ, ರಾಜಪರಮೇಶ್ವರ, ಆದಿತ್ಯ ನಂದನ ಪ್ರಭೂಗೆ ಜೈ, ಸಂಯಮಿನಿ ನಗರಾಧೀಶ್ವರ, ಧರ್ಮಪ್ರಿಯ, ಶ್ರೀಮದ್ ಯಮಧರ್ಮ ಪ್ರಭೂಗೆ ಜೈ.

(ಯಮಧರ್ಮನು ಆಸನಾರೂಢನಾಗುವನು. ಅನಂತರ ಚಂಡನು ಒಂದೊಂದಾಗಿ ಲೆಕ್ಕದ ಪುಸ್ತಕಗಳನ್ನು ತಂದು ಯಮನ ಸಮ್ಮುಖದಲ್ಲಿರಿಸುವನು. ಅವುಗಳನ್ನು ಒಂದೊಂದಾಗಿ ನೋಡುತ್ತಲೇ ಯಮನಿಗೆ ಕೋಪೋದ್ರೇಕವಾಗುವುದು. ಯಮನ ಮನೋಭಾವವನ್ನರಿತು ಚಾರರು ಮೆತ್ತಗೆ ಅಲ್ಲಿಂದ ಹೊರಟುಹೋಗುವರು.)

**ಯಮ:** (ನಿಟ್ಟುಸಿರು ಬಿಟ್ಟು) ಏನ್ಲೆಕ್ಕಾ ಇದು! ಏನ್ಕೆಲಸಾ ಇದು!! ಎಷ್ಟು ದಿನಾ ಅಂತ ಈ ಹಾಳು ಚಾಕರಿ ಮಾಡೋದು? ಹಗಲೂ ಅಂತ ಇಲ್ಲ, ರಾತ್ರಿ ಅಂತ ಇಲ್ಲ, ಹೊತ್ತೂ ಗೊತ್ತೂ ಇಲ್ದೆ, ಈ ಭೂಲೋಕದ ಪ್ರಾಣಿಗಳು ಸಾಯ್ತಾ ಹೋದ್ರೆ ಎಷ್ಟೂ ಅಂತ ಲೆಕ್ಕಾ ಬರೆಯೋದು? ಸ್ವಲ್ಪವಾದ್ರು ವಿರಾಮ ಬೇಡ್ವೆ? ವಿಶ್ರಾಂತಿ ಬೇಡ್ವೆ?

**ಚಂಡ:** (ಪುನಃ ಪ್ರವೇಶಿಸಿ) ಪ್ರಭೂ! ಇದು ಈ ದಿನ ಸತ್ತವರ ಲೆಕ್ಕ.

**ಯಮ:** (ಕೋಪದಿಂದ) ಸಾಕು, ತೊಲಗೋ ಆತ್ತ. (ಚಂಡ ಹೊರಟು ಹೋಗುವನು) ಈ ಕೆಲ್ಸ ನನ್ಗೆ ಬೇಡ, ಬೇರೆ ಯಾವ್ದಾದ್ರು ಕೆಲ್ಸ ಕೊಡಿ

ಅಂತ ಆ ನಮ್ಮ ದೊರೇನ, ಶಿವನ್ನ, ಕೇಳ್ಕೊಂಡ್ರೆ—'ಸಾಕು ಸಾಕು, ನಿನ್ನ ಯೋಗ್ಯತೆಗೆ ಇದೇ ದೊಡ್ಡ ಕೆಲ್ಸ. ನಿನಗಿರೋ ಪಾಂಡಿತ್ಯಕ್ಕೆ ನಿನಗಾಗಿ ಬೇರೆ ಕೆಲ್ಸ ಸೃಷ್ಟಿ ಮಾಡ್ಲಿಕ್ಕೆ ಬ್ರಹ್ಮನಿಗೆ ಹೇಳ್ತೀನಿ. ಎಂಥೆಂಥಾ ಸಂಶೋಧನೆ ಮಾಡಿದವರೆ ಕೆಲ್ಸವಿಲ್ದೆ ತಿರುಗ್ತಾ ಇರ್ವಾಗ ಈ ಮಂಕನಿಗೆ ಬೇರೆ ಕೆಲಸ ವಂತೆ'—ಅಂತ ಹೇಳ್ಬಿಟ್ಟ. ಮೇಲಧಿಕಾರಿಗಳು ಹೀಗೆ ಬಾಯ್ಗೆ ಬಂದಂತೆ ಮಾತ್ನಾಡಿದ್ರೆ ಎಲ್ಲೀವರ್ಗೆ ಅಂತ ಸಹನೆ ಮಾಡೋದು? ನನ್ನಂಥ ಅನುಭವ ಶಾಲಿಗೆ 'ಮಂಕ' ಅಂದರೆ ಹೇಗೆ ಸಹನೆ ಮಾಡೋದು? ಪ್ರತಿ ಸಲವೂ ಸಂಶೋಧನೆಯ ಮಾತನ್ನೇ ಎತ್ತಿದರೆ, ನನಗೇನು ಇಲ್ಲಿಂದ ಮೋಕ್ಷಾನೆ ಇಲ್ವೆ? ನನಗೇನು ಸಂಶೋಧನೆ ಮಾಡುವ ಯೋಗ್ಯತೆ ಇಲ್ವೆ? ನೋಡ್ತೀನಿ. ಒಂದು ಉತ್ತಮ ಸಂಶೋಧನೆ ಕೈಕೊಂಡು, ಅದರಲ್ಲಿ ಯಶಸ್ವಿಯಾಗಿ, ನನ್ನ ಮೇಧಾಶಕ್ತಿಯನ್ನ ಈ ನಮ್ಮ ಮಂಕ ದೊರೆಗೆ ತೋರಿಸ್ತೀನಿ. ಇರಲಿ. ಸದ್ಯಾ ಸಂಶೋಧನೆಗೊಂದು ಹೊಸವಿಷಯ ಆಗಬೇಕಲ್ವೆ? (ಸ್ವಲ್ಪ ಯೋಚಿಸಿ, ನಕ್ಕು) ಭೇಷ್, ಭೇಷ್, ಎಷ್ಟು ಜನಕ್ಕೆ ಗೊತ್ತಿದೆ ಈ ನನ್ನ ಹೊಸ ವಿಚಾರ? ಇಲ್ಲಿಯ ವರೆಗೂ ಯಾರೂ ಈ ವಿಷಯುವನ್ನು ಕಂಡುಹಿಡಿಯು ಲಿಲ್ಲ. ಏಕೆ? ಯಾವನಲ್ಲಿಯೂ ಈ ಸದ್ಭಾವನೆ ಒಡಮೂಡಿರಲಿಲ್ಲ. (ನಸು ನಕ್ಕು) ಪ್ರತಿಯೊಬ್ಬನಿಗೂ ಸುಲಭದಲ್ಲಿ ಮೋಕ್ಷವನ್ನುಂಟು ಮಾಡಿಕೊಡು ವುದೇ ನನ್ನ ಹೊಸ ವಿಚಾರ. 'ಮನುಷ್ಯರ ಮನಸ್ಸು ಯಾವ ರೀತಿಯಲ್ಲಿ ವರ್ತಿಸಿದರೆ ಮೋಕ್ಷವು ತಪ್ಪದೆ ಸಿಕ್ಕುತ್ತೆ'– ಎನ್ನುವುದನ್ನು ಕಂಡುಹಿಡಿದು, ಪ್ರಕಟಿಸಿಬಿಡುತ್ತೀನಿ. ಎಂಥಾ ಉತ್ತಮ **ಸಂಶೋಧನೆ!** ಮೋಕ್ಷಕ್ಕೊಂದು ಸುಲಭ ಮಾರ್ಗ! ಎಲ್ಲರಿಗೂ ಸ್ವರ್ಗ ಸುಖ!! ಭೇಷ್, ಭೇಷ್. ಜಗತ್ತಿ ನಲ್ಲಿ ಪಾಪಿಗಳೇ ಇಲ್ಲದಂತಾಗಿ ಎಲ್ಲರೂ ಸ್ವರ್ಗವಾಸಿಗಳಾಗುತ್ತಾರೆ. ಎಲ್ಲರೂ ನನ್ನೊಬ್ಬನನ್ನೇ ಕೊಂಡಾಡುತ್ತಾರೆ. ಅಂದು ನನಗಿಂತಲೂ ಸುಖಿಗಳಿಲ್ಲ. ನನಗಿಂತಲೂ ಹಿರಿಯರಿಲ್ಲ. ನನಗಿರುವಷ್ಟು ವಿಶ್ರಾಂತಿ ಅನ್ಯರಿಗಿಲ್ಲ. ಸರಿ. ಇನ್ನು ಕಾಲವಿಳಂಬ ಮಾಡಕೂಡದು. ಶುಭಸ್ಯ ಶೀಘ್ರಂ. (ಸುತ್ತಲೂ ನೋಡಿ) ಚಂಡಾ, ಎಲೋ ಚಂಡಾ.......

**ಚಂಡ**: (ಪ್ರವೇಶಿಸಿ) ಬಂದೆ ಜೀಯಾ.

**ಯುಮ**: ಎಲ್ಲಿ ಹೋಗಿರ್ತೀಯೋ ಸಾಯೋಕೆ? ಕರೆದ್ರು ಕೇಳೋ ದಿಲ್ವೆ? ಅವನೆಲ್ಲೋ ವಿಕ್ರಮ?

**ಚಂಡ:** ಹೀಂಗೆ ಬರ್‍ತಾ ಇದಾನೆ ನಮ್ಮಕಡ್ಗೆ ನನ್ನೊಡೆಯ.

**ವಿಕ್ರಮ:** (ತೆರೆಯಿಂದಲೆ) ಶ್ರೀಮನ್ಮಹಾರಾಜಾಧಿರಾಜ, ರಾಜ ಪರಮೇಶ್ವರ, ಆದಿತ್ಯನಂದನ ಪ್ರಭೂಗೆ ಜೈ. (ಪ್ರವೇಶಿಸುವನು.)

**ಯಮ:** ಎಲೋ ಅಧಿಕಪ್ರಸಂಗಿ! ಸಾಕು ಮುಗಿಸೋ. ಇಷ್ಟರಲ್ಲಿಯೆ ಎಲ್ಲೆಲ್ಲಿಯೊ ಸುತ್ತಾಡಿಕೊಂಡು ಬಂದಿದಾನೆ.

**ವಿಕ್ರಮ:** ಎಲ್ಲಿ ಇಲ್ಲ ಪ್ರಭೂ. ಭೂಲೋಕದಿಂದ ಮೂಟೆಗಳು ಬಂದಿದ್ವು. ಎಲ್ಲಾ ಬಿಚ್ಚಿ ನೋಡಿ, ನರಿ ನಾಯಿ, ಕತ್ತೆ ಕೋಳಿ, ಜನ ದನ, ಯಾವ್ದು ಏನು ಅಂತ ನೋಡ್ಗಿಡ್ಕೊಂಡು ತಮ್ಮ ನಾಮಸ್ಮರಣೆ ಮಾಡ್ತ ಹೀಂಗೆ ಬಂದೆ.

**ಯಮ:** ಎಲೋ ಮಾತಿನ ಮಲ್ಲ! ನಿನ್ನ ಮಾತಿನ ಸುರಿಮಳೆನೆಲ್ಲ ಇಲ್ಲೇ ಸುರಿಸ್ಬೇಡ್ವೊ. ಯಾರು ಕರೆದ್ರು, ಯಾತಕ್ಕೆ ಕರೆದ್ರು ಎನ್ನೋದನ್ನ ಯೋಚ್ನೆ ಮಾಡ್ದೆ ಕಹಳೆ ಕೂಗ್ದಂತೆ ಕೂಗಲಿಕ್ಕೆ ಪ್ರಾರಂಭಿಸಿದ್ರೆ—

**ವಿಕ್ರಮ:** ತಪ್ಪಿದ್ದರೆ ನನ್ನೊಡೆಯ ಕ್ಷಮಿಸಿಬಿಡಿ. ಯಾರು ಕರೆದ್ರು, ಯಾತಕ್ಕೆ ಕರೆದ್ರು ಎನ್ನೋದನ್ನೇ ಯೋಚ್ನೆ ಮಾಡ್ತಾನೆ ಇರ್‍ತೀನೆ. ತಮ್ದನಿ ಕೇಳಿದ್ಕೊಡ್ಲೆ ಹಾಜೂರಿರ್‍ತೀನೆ. ಏನಾದ್ರು ಅಪ್ಪಣೆ ಆದೀತೋ ಮಾಡೇನೋ ಅಂತ ಕಾದು ಕೂತಿರ್‍ತೀನೆ. ತಮ್ಮಲ್ಲಿ ಭಕ್ತಿ, ತಮ್ಮ ಕೆಲ್ಸದಲ್ಲಿ ಶ್ರದ್ಧೆ, ತಮ್ಮ ಮಾತ್ನಲ್ಲಿ ವಿಶ್ವಾಸ ಇವೆಲ್ಲ ನನ್ನ ಹುಟ್ಗುಣ. ಇದಲ್ದೆ—

**ಯಮ:** ಇದಲ್ದೆ ಮುಂದೇನು ಬೇಡ್ವೊ ನಿನ್ಕಥೆ. ಹೀಗೆ ಬಾ. ಇನ್ನೂ ಹತ್ತಿರ ಬಾ. ಎಲೋ ಚಂಡಾ! ನೀನು ಬಾರೋ. ಹೀಗೆ, ಇನ್ನೂ ಸರಿ. ಇಗೋ ಒಂದು ವಿಷಯ ಹೇಳ್ತೀನೆ. ಚನ್ನಾಗಿ ಕೇಳ್ಬೇಕು; ಗೋಪ್ಯದಲ್ಲಿ ಮಾಡ್ಬೇಕು; ತಿಳಿತೆ?

**ಚಂಡ:** ತಿಳಿತು ನನ್ನೊಡೆಯ. ಗೋಪ್ಯದಲ್ಲಿ ಕೇಳ್ಬೇಕು, ಮತ್ತೇ....

**ವಿಕ್ರಮ:** ಎಲೋ ಶಿಖಾಮಣಿ, 'ಚನ್ನಾಗಿ ಕೇಳ್ಬೇಕೂ, ಗೋಪ್ಯದಲ್ಲಿ ಮಾಡ್ಬೇಕು' ಅಂತ ಹೇಳಿದ್ರು—ತಿಳಿತೆ?

**ಚಂಡ:** ಏನ್ಮಾಡ್ಲಣ್ಣಾ, ಈ ಹಾಳು ತಲ್ಯಾಗೆ ಹೋಗೋದೆ ಇಲ್ಲ ಕೂಡ್ಲೆ.

**ವಿಕ್ರಮ:** ದೇವ್ರು! ಇವನ ಈ ಹಾಳು ತಲೆ ಕೂಡ್ಲೆ ಹೋಗ್ದಿದ್ರೆ ನಮ್ಮ ತಲೆ ಹೋಗೋ ಕೆಲ್ಸ ಮಾಡ್ತಾನಿವನು, ಯಾವುದಾದ್ರು ಕೆಲ್ಸ

ಇವನೊಬ್ಬನ್ಗೆ ಒಪ್ಸಿದ್ರೆ.

**ಯಮ:** ಅದಕ್ಕಾಗಿನೋ ನಿನ್ನೂ ಜತೆ ಮಾಡಿರೋದು. ಹುಷಾರಿ ಮೇಲೆ ಕೆಲ್ಸ ಮಾಡಿಸು. ನೀನ್ನಡಿದಂತೆ ಅವನ್ನಡೆಬೇಕು. ನೀನು ಮುಂದೆ, ಅವನು ನಿನ್ಹಿಂದೆ. ಇಲ್ಲಿ ನೋಡಿ—ಈ ದಿನ ರಾತ್ರಿ ನೀವಿಬ್ರು ಯಾರಿಗೂ ಕಾಣ್ದಂತೆ ಭೂಲೋಕಕ್ಕೆ ಹೋಗಿ, ಒಂದೊಳ್ಳೆ ತಾಜಾ ಆಸಾಮಿ ಹಿಡು ಕೊಂಡು ಬರಬೇಕು. ಬದುಕಿರೋನ್ನೆ ತರಬೇಕು. ಎಲ್ಲಾದರು ಸದ್ದಾದ್ರೆ...

**ವಿಕ್ರಮ:** ಸದ್ದಾದ್ರೆ ನಮ್ಮುಲೆ ಹೋದ್ಹಾಂಗೆ.

**ಚಂಡ:** ಆಯ್ತು ದೇವ್ರು.

**ವಿಕ್ರಮ:** ಇನ್ನೂ ಆಗಿಲ್ಲ ತಡೆಯೊ. ಹೇಳೋದೆಲ್ಲ ಹೇಳ್ಬಿಡ್ಲಿ. ಮತ್ತೆ ಲ್ಲಾದ್ರು....

**ಯಮ:** ಹೌದು, ಮತ್ತೆಲ್ಲಾದ್ರು ಒಂದಕ್ಕೊಂದು ಮಾಡೀರಿ. ಮುಖ ಲಕ್ಷಣ ನೋಡಿ. ಚುರುಕಾಗಿರ್ಬೇಕು ಆಸಾಮಿ. ಗಟ್ಟಿಮುಟ್ಟಾಗಿರ್ಬೇಕು. ತರುವಾಯ ಇಲ್ಲಿಗೆ ಬಂದನಂತರ, ಆ ಮನುಷ್ಯ ಹೇಗೆ ಬಂದಾ ಅಂತ ಯಾರಿಗೂ ಅರ್ಥವಾಗಬಾರದು. ನಿಮ್ಹಾಡ್ಗೆ ನೀವಿದ್ಬಿಡಿ ಅಲ್ಲಿಂದ ನನ್ಕೆ ಲಸ ನಾನು ಪ್ರಾರಂಭಿಸ್ತೇನೆ.

**ಚಂಡ:** ಒಳ್ಳೇದು ನನ್ತಂದೆ.

**ಯಮ:** ಬೇರೊಂದು ಮಾತು. ಈಗ ನಾನ್ಮಾಡೋ ಕೆಲ್ಸ ಕೈಗೂಡಿದ್ರೆ....

**ವಿಕ್ರಮ:** ಅಪ್ಪನ ಕೆಲ್ಸ ಕೈಗೂಡಿದ್ರೆ ಈ ಮಕ್ಕಳ ನಶೀಬು ತಿರಿಗಿ ದ್ಹಾಂಗೆ.

**ಯಮ:** ನಿಮ್ಮ ನಶೀಬೊಂದೇ ಅಲ್ವೋ, ನನ್ನದೂ. ಇದರಿಂದ ಬರೋ ಕೀರ್ತಿಯಲ್ಲಿ ನಿಮ್ಗೂ ಭಾಗ ಇದೆ. ಅದರ್ಮೇಲೆ ಪದವೀ ಇದೆ, ಪುರು ಷಾರ್ಥ ಇದೆ.

**ಚಂಡ:** ಆಗಲಿ ನನ್ತಂದೆ. ನಿಮ್ಮ ಸಂತೋಷಾನೇ ನಮ್ಮೇಳ್ಗೆ.

**ವಿಕ್ರಮ:** ನಿಮ್ಮೇಳ್ಗೆನೇ ನಮ್ಮ ಹರಕೆ. ನಿಮ್ಮಾಜ್ಞೆನೇ ನಮ್ಮ ಭಾಗ್ಯ.

**ಯಮ:** ಸರಿ. ನಾನಿನ್ನು ಹೊರಡ್ತೇನೆ, ಸಾಯಂಕಾಲವಾಯ್ತು. ನಾನ್ಹೇಳಿದ್ದೆಲ್ಲ ಚೆನ್ನಾಗಿ ಜ್ಞಾಪಕದಲ್ಲಿರ್ಲಿ. ನಿಮ್ಗೆ ಕಷ್ಟವಾದ್ರು ಚಿಂತೆ ಯಿಲ್ಲ, ಫಲಾ ಸಿಗೋ ಕೆಲ್ಸ ಮಾಡಿ.

**ಚಂಡ:** ಒಳ್ಳೇದು ನನ್ನೊಡೆಯ.

**ಯಮ:** ಸರಿ. ವಿಕ್ರಮ ಬಹಳ ಜಾಗ್ರತೆ ಇರಲಿ. (ಯಮನು ತೆರಳುವನು.)

**ವಿಕ್ರಮ:** ಎಲೋ ಚಂಡಾ, ಹೀಗೆ ಬಾ. ಎಲ್ಲಾ ತಿಳೀತೇನೊ? ಸುಮ್ನನೆ ತಿಳೀತು ಅಂತ ಹೇಳ್ಬಿಟ್ರೆ ತಿಳಿದಹ್ಗಾಂಗಾಯ್ತೇನೊ? ಸ್ವಲ್ಪ ಕೆಲ್ಸಾ ಮಾಡ್ಬಾಗ ಎಚ್ಚರಿಕೆಯಿಂದ ಇರು. ರಾತ್ರಿ ಹೊತ್ತು, ದೂರದ ಹಾದಿ, ಕಾಣದ ಮಾರ್ಗ. ನಿದ್ದೆಗಣ್ಣಾಗೆ ಮುಗ್ಗರಿಸಿ ಬಿದ್ರೆ ಮೂವತ್ತೆರಡು ಹಲ್ಲೂನು ಬಿದ್ದಾವು.

**ಚಂಡ:** ನೀನಿದ್ದೀಯಲ್ಲಣ್ಣಾ ನನ್ನ ಮಾರ್ಗದರ್ಶಕ. ನೀನ್ನಡಿದ್ಹಾಂಗೆ ನಾನ್ನಡೆಯೋದು, ಅಷ್ಟೇ.

**ವಿಕ್ರಮ:** ಭೇಷ್. ಅಷ್ಟೊಂದು ಜ್ಞಾಪಕವಿದ್ರೆ ಸಾಕು. ಸಮಯವಾಗ್ತಾ ಬಂತು. ನಡೆ ಹೋಗೋಣ.

**ಚಂಡ:** ಏ ನೀನ್ಮುಂದೆ ನಾನಿನ್ನ ಹಿಂದೆ ಅಂತ ಹೇಳಿದಾರೆ ಅಪ್ಪಾವ್ರು.

**ವಿಕ್ರಮ:** ಎಲೋ ಮಾತ್ನಲ್ಲಿ ಒಳ್ಳೇ ಹುಷಾರಿ ಇದ್ದೀ ಕಣೋ ನೀನು. ಹೊರಡೋಣ ನಡೆ. ಕೆಲ್ಸ ಜೈಭೇರಿ ಹೊಡ್ಸಿ ಬಿಡೋಣ. (ತೆರಳುವರು.)

(ಅರಣ್ಯದ ತೆರೆ ಬೀಳುವುದು.)

---

## ದೃಶ್ಯ ೨

[ಅರುಣೋದಯ ಸಮಯ. ಯಮಪುರಿಗೆ ಸಮೀಪಿಸಿದ ಒಂದು ಬೀಡು. ವಿಕ್ರಮನು ಹಾಡುತ್ತ ಪ್ರವೇಶಿಸುವನು.]

**ವಿಕ್ರಮ:** ಎಲೋ ಚಂಡಾ, ಬೇಗ ಬೇಗನೆ ಬಾರಯ್ಯ, ಸಮಯವಾಗುತ್ತ ಬಂತು. ಹೇಗೂ ಒಂದು ಜೇಟಿ ಹೊಡಕೊಂಡು ಮರಳಿ ನಮ್ಮೂರ ಬಳಿಗೆ ಬಂದಿದೇವೆ. ಇಲ್ಲಿಯೇ ಸ್ವಲ್ಪ ವಿರಾಮ ಹೊಂದಿ ಮುಂದಕ್ಕೆ ಹೋಗೋಣ. (ಚಂಡನು ಪ್ರವೇಶಿಸಿ ಹೊತ್ತಿದ್ದ ಮನುಷ್ಯನನ್ನು

ಮೆತ್ತಗೆ ನೆಲದ ಮೇಲೆ ಮಲಗಿಸುವನು.)

**ಚಂಡ:** ಶಿವ, ಶಿವ, ಶಿವ, ಶಿವ....ಬೇಡಪ್ಪಾ ಬೇಡ ಈ ಹಾಳ್ಕೆಲ್ಸ. ಎಲ್ಲೋ ಗಾಳಿ ಹಾಕ್ತಾ ನಿಂತವಗೆ ಇಂಥಾ ಕೆಲ್ಸ ಹೇಳಿದ್ರೆ ವಿಚಾರ ಮಾಡ್ದೆ ಒಪ್ಕೊಂಡು ಬಿಟ್ಟೆ. ಜತೇಲಿ ಇವನೊಬ್ಬ. ಒಳ್ಳೇ ಪ್ರಾಣಿ ಆರ್ಸಿಬಿಟ್ಟೆ ಮಹರಾಯ. ಹೊತ್ಕೊ ಹೊತ್ಕೊ ಹೆಗಲು ಕಿತ್ತಿಹೋಯ್ತು, ಉಸಿರು ಕಟ್ಟಿ ಹೋಯ್ತು....ಎಲೋ! ನಗ್ತಾ ನಿಂತಿದಿಯಲ್ಲೋ ಪ್ರಾಣ ತೆಗೆಯೋನೆ.

**ವಿಕ್ರಮ:** ಶುಭಕಾರ್ಯದಲ್ಲೆಲ್ಲಾ ನಗ್ತಾ ಇರಬೇಕಯ್ಯಾ. ಮುಂದೆ ಅಳೋ ಹೊತ್ತು ಬಂದರೆ ಇದ್ದೇ ಇದೆ ಅಳೋಕೆ. ಏನೇ ಆಗ್ಲಿ, ಒಂದು ಬೇಟೆನಂತೂ ಹೊಡಕೊಂಡು ಬಂದಿದೇವೆ. ಪಾಪ, ನಿನಗೆ ಮಾತ್ರ ಹೆಚ್ಚು ಕಷ್ಟವಾಯ್ತಯ್ಯ. ಆದರೆ ಒಂದ್ಮಾತು ಅರ್ಥವಾಯ್ತು ನೋಡು—ನಿನ್ತಲೇ ಗಿಂತ ಈ ನಿನ್ನ ಮೈ ಗಟ್ಟಿ ಅನ್ನೋದು.

**ಚಂಡ:** ಸಾಕಪ್ಪ ನಿನ್ಕೊಂಡಾಟ. ಮಾರ್ಗದಲ್ಲಿ ಜಗಳ ಕಟ್ಕೊಳ್ಬಾರ್ದಂತ ಸುಮ್ಮನೆ ಬಂದಿದೇನೆ. ನನ್ನ ಕೆಣಕ್ಬೇಡ ಮಹರಾಯ. ಸ್ವಲ್ಪ ಆ ಪ್ರಾಣೀನ ಎಬ್ಬಿಸಿ ನೋಡು, ಬದುಕಿದೆಯೋ ಸತ್ತಿದೆಯೋ. ಮಾತ್ಗೀತು ಬರುತ್ತೆಯೋ ಇಲ್ವೋ ನೋಡಿಕೊ.

**ವಿಕ್ರಮ:** ಅದಕ್ಕೆ ಮಾತು ಬಾರದಿದ್ರೆ ನನ್ಗೆ ಮಾತು ಬರುತ್ತೆ ಬಾರಯ್ಯ. ವಿನಾಶಕಾಲಕ್ಕೆ ವಿಪರೀತ ಬುದ್ಧಿ. ಎಂದೂ ಇಲ್ಲದ ಇಂಥಾ ಕೆಲ್ಸಕ್ಕೆ ನಮ್ದೊರೆ ಕೈಹಾಕಿರ್ವಾಗ ನಾವು ಮಾಡಿದ ಕೆಲ್ಸ ಹಾಳಾಗೋಕಿಲ್ಲ. ಹಾಗೇನಾದ್ರು ಇದ್ದಿದ್ರೆ ಆ ಕತ್ಲಾಗೆ ಆ ಕಾಣದ ಮಾರ್ಗ ಹಿಡಕೊಂಡು ಅಷ್ಟೊಂದು ದೂರ ಹೋಗ್ತಾ ಇದ್ವೆ? ದೇವರ ಮನಸ್ಸಿಗೆ ಬೇಡಾಗಿದ್ರೆ ಈ ಪ್ರಾಣಿಯೊಬ್ನೆ ಗೊರಕೆ ಹೊಡೀತ ಹೊರಗೆ ಮಲ್ಗಿರುತಿದ್ನೆ? ಎಲ್ಲಾ ವಿಚಿತ್ರ ಕಣಯ್ಯಾ. ಆಲ್ಲ, ಇದೆಲ್ಲಕ್ಕೂ ಆಶ್ಚರ್ಯ ಅಂದರೆ ನನಗೆ ನೀನೊಬ್ಬನೇ ಇವನ್ನ ಅಲ್ಲಿಂದಾ ಇಲ್ಲೀ ವರೆಗೆ ಹೊತ್ತು ತಂದಿರೋದಯ್ಯ!

**ಚಂಡ:** ಎಲೋ....

**ವಿಕ್ರಮ:** ಇಲ್ಲಪ್ಪಾ ಸತ್ಯದ ಮಾತು ಹೇಳ್ತೇನೆ. ಕೆಲ್ಸ ಮಾಡ್ದೆ ಇದ್ದರೂ ನಾನು, ಮಾಡಿದವನ್ನ ನೋಡಿ ಸಂತೋಷಪಡ್ತೇನೆ.

**ಚಂಡ:** ಬಹಳ ದೊಡ್ಡ ಮನುಷ್ಯನಯ್ಯ ನೀನು. ಇಲ್ಲೀ ವರೆಗೂ ನಿನ್ನಯೋಗ್ಯತೆ ಗೊತ್ತಿರಲಿಲ್ಲ ನನಗೆ.

(ಮಲಗಿದ್ದ ಮನುಷ್ಯ, ಒಬ್ಬ ಆಚಾರ್ಯ, ಎಚ್ಚತ್ತು)

**ಆಚಾರ್ಯ:** ಶ್ರೀಹರೀ! ವಾಸುದೇವಾ! ಏನ್ಕಳಿಯಪ್ಪಾ ಇದು; ಇಷ್ಟೇಕೆ ಚಳಿ ಬಿದ್ದಿದೆಯೋ ಈ ದಿನ ನಾ ಬೇರೆ ಕಾಣೆ....ಎಲೇ ಇವುಳೇ! ಬಾಗಿಲು ತೆಗೆಯೆ, ಹಾಳ್ಚಳಿ....ಎಲೇ....ಇವುಳೇ! ಬಾಗಿಲ್ತೆಗೆಯೇ....ಏನ್ ನಿದ್ರೆನೋ ಈ ಹೆಂಗಸ್ರಿಗೆ, ಯಾರಾದ್ರು ಹೊತ್ಕೊಂಡು ಹೋದ್ರು ಗೊತ್ತಾಗೋಕಿಲ್ಲ.

**ವಿಕ್ರಮ:** ಎದ್ದಿದಾನಯ್ಯಾ, ಏನೋ ಗೊಣಗ್ತಾ ಇದಾನೆ. ಹತ್ತಿರ ಹೋಗು, ಮೆತ್ಗೆ....

**ಆಚಾರ್ಯ:** ಎಲಾ ಪುಟ್ಟೂ!....ಪುಟ್ಟೂ!........ನೀನಾದ್ರು ಏಳಪ್ಪಾ ಬೇಗ ಬಾಗಿಲ್ತೆಗೆ.

**ವಿಕ್ರಮ:** ಮೆತ್ಗೆ ಕಣೋ, ನಿನ್ನ ಕರಾಳ ರೂಪ ನೋಡಿ ಅಂಜಿಕೊಂಡಾನು.

**ಆಚಾರ್ಯ:** (ಮೇಲಕ್ಕೆದ್ದು ಕಣ್ಣನ್ನುಜ್ಜಿಕೊಳ್ಳುತ್ತ ಎದುರಿನಲ್ಲಿದ್ದ ಚಂಡನನ್ನು ನೋಡಿ, ಚಿಟ್ಟನೆ ಚೀರಿ) ಅಯ್ಯಮ್ಮಾ! ಓ ಇವುಳೇ! ಎಲಾ ಪುಟ್ಟೂ! ಬನ್ರೋ....ದೆವ್ವಾ, ಭೂತಾ....

**ಚಂಡ:** ಸ್ವಾಮೀ! ಅಂಜಬೇಡಿ.

**ಆಚಾರ್ಯ:** ಅಬ್ಬೇ, ನ್ನಮೇಲೆ ಬರ್ತಿದೆ....ಭೂತಾ....ಸತ್ತೇ....

**ಚಂಡ:** ಅಂಜಬೇಡಿ ಸ್ವಾಮೀ. ನಾವು ಭೂತಾನು ಅಲ್ಲ, ಪ್ರೇತಾನು ಅಲ್ಲ.

**ಆಚಾರ್ಯ:** ಅಲ್ವೇ....ಇದೇನಪ್ಪಾ ಶ್ರೀ ಹರೀ....

**ಚಂಡ:** ಇದು ನಿಮ್ಮ ಮನೇನು ಅಲ್ಲ.

**ಆಚಾರ್ಯ:** ಅಲ್ವೇ? ನಾರಾಯಣ, ನಾರಾಯಣ.

**ವಿಕ್ರಮ:** ಎಲೋ ವಿಕ್ರಮ! ಹೀಗೆ ಬಾರೋ.

**ಆಚಾರ್ಯ:** (ಪಕ್ಕಕ್ಕೆ ನೋಡಿ) ಅಯ್ಯೋ ಮತ್ತೊಂದು! ಶ್ರೀ ಹರೀ....

**ವಿಕ್ರಮ:** ಹರಿದಾಸರೇ, ಅಂಜಬೇಡಿ. ನಾವಿದ್ದೇವೆ.

**ಆಚಾರ್ಯ:** ನೀವಿರೋದಕ್ಕೇ ನನಗೆ ಅಂಜಿಕೆ.

**ವಿಕ್ರಮ:** ಬೇಡ ಸ್ವಾಮಿ. ತಮ್ಮನ್ನ ಇಲ್ಲಿಗೆ ತಂದಿರೋರು ನಾವೇ.

**ಆಚಾರ್ಯ:** ಜೀವಾ ತೆಗೆಯೋಕಾ?

**ವಿಕ್ರಮ**: ನಾರಾಯಣ, ನಾರಾಯಣ. ತಮ್ಮ ಪ್ರಾಣ ತೆಗೆಯೋಕೆ ನಾವೇನಾದ್ರು ಕಳ್ರೇ?

**ಆಚಾರ್ಯ**: ಕಳ್ರಲ್ಲಪ್ಪಾ, ನನ್ನನ್ನು ಮಾತ್ರ ಯಾರಿಗೂ ತಿಳಿದ್ಹಾಂಗೆ ತಂದೀರಪ್ಪೆ. ಯಮದೂತರಿದ್ದ ಹಾಗೆ ಇದ್ದೀರಲ್ಲಯ್ಯಾ!

**ಚಂಡ**: ಎಲಾ! ಇವನ್ನೆ....

**ವಿಕ್ರಮ**: ಏ ಸುಮ್ಮನಿರೋ. ಸ್ವಲ್ಪ ನಿಧಾನಿಸಿಕೊಳ್ಳಿ ಸ್ವಾಮಿ. ಭಯ ಪಡ್ಬೇಡಿ. ನಿಮ್ಪ್ರಾಣ ನಮ್ಮ ಕೈಯಲ್ಲಿದೆ. ಯಾಕೆ ಹೆದರ್ತೀರಾ?

**ಆಚಾರ್ಯ**: ಅಯ್ಯಪ್ಪಾ, ಏನಾದ್ರು ಮಾಡಿ, ಪ್ರಾಣ ಮಾತ್ರ ಕಾಪಾಡಿ. ಕೇವಲ ಬಡ ಆಚಾರಿ ನೋಡಿ.

**ವಿಕ್ರಮ**: ನೋಡ್ತೇವೆ. ನೀವಿಲ್ಲಿ ಕೇಳಿ ಮೊದಲು. ತಮ್ಮಿಂದ ನಮ್ಗೊಂದು ಕೆಲ್ಸ ಆಗ್ಬೇಕು.

**ಚಂಡ**: ನಮ್ಗೆ ಅಂದರೆ ನಮ್ಗೇ ಅಲ್ಲಸ್ವಾಮಿ. ನಮ್ಮ ಇವುರ್ಗೆ....

**ವಿಕ್ರಮ**: ಸುಮ್ಮನಿರೋ ನೀನು, ತಲೆಹರಟೆ ಕೊಚ್ಬೇಡ. ಸ್ವಾಮಿ ಆಚಾರ್ರೆ! ತಮ್ಮಿಂದ ನಮಗೊಂದು ಕೆಲ್ಸ ಆಗ್ಬೇಕು.

**ಆಚಾರ್ಯ**: ಏನು ಶ್ರಾದ್ಧಾನೆ?

**ಚಂಡ**: ಛೆ ಛೇ, ಅಲ್ಲ ಸ್ವಾಮಿ.

**ಆಚಾರ್ಯ**: ಅಲ್ಲಾ....ಲಗ್ನಾನೆ?

**ವಿಕ್ರಮ**: ಅದಾವುದ್ದು ಅಲ್ಲ ಸ್ವಾಮಿ. ಸ್ವಲ್ಪ ಕೇಳಿ. ನಮ್ದೊರೆ ಚನ್ನಾಗಿ ಗಳಿಸಿಟ್ಟಿದಾರೆ. ಅವರಿಗೊಬ್ರು ನಿಮ್ಮಂಥವರು ಬೇಕಿತ್ತು.

**ಆಚಾರ್ಯ**: ನನ್ಗೆಲ್ಲಾ ಗೊತ್ತಾಯ್ತಯ್ಯ. ನನ್ನಾಗ್ಲೆ ಲಗ್ನವಾಗಿದೆ.

**ವಿಕ್ರಮ**: ಅಬ್ಬೇ, ಸುಮ್ನೆ ಕೇಳಿ ಹರಿದಾಸ್ರೆ. ಅವರ್ಗೆ ತಿಂಬೋಕೆ ಯಾರಿಲ್ಲಾ ಅಂತ ತಮ್ಮನ್ನ ಬರ್ಮಾಡಿಕೊಂಡಿದಾರೆ.

**ಆಚಾರ್ಯ**: ಅಂಥವನಾರಯ್ಯ ನಿಮ್ದೊರೆ?

**ಚಂಡ**: ಯಮಧರ್ಮಪ್ರಭು.

**ಆಚಾರ್ಯ**: ಅಯ್ಯೋ, ನಾರಾಯಣಾ! ಇದೇನ್ರಯ್ಯ ಹೆಸರ್ಹೇಳಿಯೆ ಕೊಲ್ತೀರಿ. ನಿಮ್ಮ ರಾಯರು ಬೇಡ, ಅವರ ಆಸ್ತಿನೂ ಬೇಡ ಸ್ವಾಸ್ತಿನೂ ಬೇಡ, ಕೈ ಬಿಟ್ಬಿಡಿ ನಾನು ಹೋಗ್ತೇನೆ.

**ಚಂಡ**: ಹಾಗೆ ಸುಮ್ನೆ ಕೈಬಿಡ್ಲಿಕ್ಕೆ ಆಗುತ್ತೆಯೆ ಸ್ವಾಮಿ; ಕಷ್ಟಪಟ್ಟು

ತಂದಿದೇವೆ. ನಿಮ್ಗೆ ಸಿಕ್ಕೋದು ನಿಮ್ಗೆ ಸಿಗಬೇಕು, ನಮ್ಗೆ ಸಿಕ್ಕೋದು ನಮ್ಗೆ ಸಿಗಬೇಕು. ಅಲ್ಲಿಂದಾಚೆ ನಿಮ್ಪಾಡಿ ನಿಮ್ಗೆ, ನಮ್ಪಾಡಿ ನಮ್ಗೆ.

**ವಿಕ್ರಮ:** ಎಲೋ ಸುಮ್ಮನಿರೋ ನೀನು. ಆಚಾರ್‍ರೆ ಇಲ್ಲಿ ಕೇಳಿ. ನಾವು ಕೈಬಿಡ್ಲಿಕ್ಕೆ ಅಭ್ಯಂತರವಿಲ್ಲ. ಆದ್ರೆ ಹೋಗ್ಲಿಕ್ಕೆ ತಮಗೆ ದಾರಿ ಗೊತ್ತಾಗ್ಬೇಡ್ವೆ? ಇದು ಲೋಕಾನೆ ಬದಲು. ಮಾರ್ಗಾ ತೋರ್‍ಸೋಕೆ ನಾವೇ ಬರಬೇಕು. ಬರೋದು ಬಂದೀರಾ, ಇಲ್ಲೀ ಸ್ವಲ್ಪ ಮೆರೆದು ಹೋಗಿ. ನಾವಿಬ್ಬರೂ ಇರೋವರೆಗೆ ತಮ್ಗೇನು ಭಯವಿಲ್ಲ. ನಾನ್ಹೇಳಿದ್ಹಾಂಗೆ ಕೇಳಿಬಿಟ್ರೆ ತಮಗೊಂದು ಕೀರ್ತಿ, ನಮಗೊಂದು ಪದವಿ, ತಮಗೆ ಸನ್ಮಾನ ನಮಗೆ ಬಹುಮಾನ.

**ಆಚಾರ್ಯ:** ದೇವರೇ, ಇದೆಂಥಾ ಜನಾನಯ್ಯ ಇವ್ರು! ಏನನ್ಯಾಯ ಮಾಡ್ಬಿಟ್ರು. ಇವರ ಮಾತ್ಕೇಳಿ ಅಳ್ಬೇಕೊ ನಗ್ಬೇಕೊ ತಿಳೀದ್ಹಾಂಗೆ ಆಯ್ತಲ್ಲ. ಇವರು ಹೇಳ್ದಂತೆ ಕೇಳಿದ್ರೆ ಕೀರ್ತಿಸನ್ಮಾನ ಎರಡೂ ಅಂತೆ. ಇಲ್ವಾದ್ರೆ?— ಅದನ್ನ ಅನ್ನೋಕೆ ಭಯವಾಗುತ್ತೆ ನನ್ಗೆ. ಏನ್ಮಾಡ್ಲಿ ಶ್ರೀಹರಿ— 'ನಂಬಿ ಕೆಟ್ಟವರಿಲ್ಲ ಗೋವಿಂದನ' ಅಂತ ನಿನ್ನ ಹೆಸರಿನ ಮೇಲೆ ಒಪ್ಪಿಕೊಂಡು ಬಿಡ್ತೇನೆ. ಆದೀತಯ್ಯ, ಅದೇನ್ಮಾಡ್ತೀರೊ ಮಾಡ್ಬಿಡಿ. ಹಾಲಾಗಾದ್ರು ಹಾಕಿ ನೀರಾಗಾದ್ರು ಹಾಕಿ.

**ವಿಕ್ರಮ:** ಹಾಗೆ ದಾರಿಗೆ ಬನ್ನಿ ಸ್ವಾಮಿ. ವಿಶೇಷವೇನಿಲ್ಲ. ನಮ್ಮ ರಾಯರ ಆಸ್ಥಾನಕ್ಕೆ ಕರಕೊಂಡು ಹೋಗ್ತೇವೆ. ತಮ್ಮನ್ನ ನೋಡ್ತಾರೆ. ಆಗ ಮಾತ್ರ ಸ್ವಲ್ಪ ಧೈರ್ಯದಿಂದ ನೀವೂ ನೋಡ್ಬಿಡಿ. ಅವರು ಮಾತ್ನಾಡ್ಸಿದ್ರೆ, ಇಲ್ಲಿ ನೋಡಿ, ಚಕಾಚಕ್ ನೀವೂ ಮಾತ್ನಾಡ್ಬಿಡಿ. ಅಲ್ಲಿಂದ ಮುಂದಿನ ನಾಟಕ ನಾವಾಡ್ತೇವೆ.

**ಚಂಡ:** ನಿಮ್ಮನ್ನ ಕಾಪಾಡೋ ಭಾರ ನಮ್ದು. ಆಗಬಹುದೆ ಸ್ವಾಮಿ?

**ಆಚಾರ್ಯ:** ಆದೀತಯ್ಯ.

**ವಿಕ್ರಮ:** ಎಲೋ ಚಂಡಾ! ಹೊರಡೋಣ ನಡೆ. ಜನ ಸುಳಿಯೋ ಮೊದಲೇ ಅಪ್ಪಾ ಅವರಿಗೆ ಆಚಾರ್ಯರ ಭೆಟ್ಟಿ ಮಾಡ್ಸೋಣ. ಬನ್ನಿ ಆಚಾರ್‍ರೆ ಹೋಗೋಣ. (ಚಂಡ ವಿಕ್ರಮರು ಮುಂದಕ್ಕೆ ಸಾಗುವರು.)

**ಆಚಾರ್ಯ:** ಕಣ್ಣಾಗಿಲ್ಲ ಕನ್ಸಿನಾಗಿಲ್ಲ, ಎಂಥಾ ಕೆಲ್ಸ ಆಗಿಹೋಯ್ತು.

ನಿನ್ನೆ ದೊಡ್ಡಮನೆ ಶ್ಯಾಮಣ್ಣೋರ ಮನೇಲಿ ಎಂಥಾ ಊಟ, ಎಂಥಾ ಊಟ! ಹೊಟ್ಟೆ ತುಂಬ ಊಟ ಕೈತುಂಬ ದಕ್ಷಿಣೆ. ಮನೆಗೆ ಬಂದು ಅವಳ್ಸರಿ ನಾಲ್ಕು ಮಾತ್ನಾಡ್ತ ಕಟ್ಟೆ ಹಿಡಿದು ಕೂತೆ, ಕತ್ಲಾಯ್ತು, ದೀಪ ಹಚ್ಚಿತು, ಅವಳು ಒಳಗೆ ಹೋದಳು, ನಾನ್ಹಾಗೆ ಮಲಗಿದೆ. ನಿದ್ರೆ ಬಂದುದೇ ಗೊತ್ತಾಗ್ಲಿಲ್ಲ. ಎದ್ದು ನೋಡಿದೆ-ಮನೆಯಿಲ್ಲ ಮಠವಿಲ್ಲ! ಊರಿಲ್ಲ ಕೇರಿಲ್ಲ! ಕೊನೇಪಕ್ಷ ಭೂಲೋಕ ಕೂಡ ಇಲ್ವೇ ನನ್ಪಾಲಿಗೆ! ಇದೇನು ಕನಸೋ ಭ್ರಮೆಯೋ ನಾ ಬೇರೆ ಕಾಣೆ. ಇವ್ರು ಹೇಳ್ತಾರೆ ಯಮ ದೂತರೂ ಅಂತ, ಮಾತ್ನಲ್ಲಿ ಕಾಣ್ತಾರೆ ಬಹು ಮೃದೂ ಅಂತ, ಇದರ ಮರ್ಮ ಬಲ್ಲ ಆ ನಮ್ಮ ಶ್ರೀಕಾಂತ. ಇಲ್ಲಿಯ ಪರಿಸ್ಥಿತಿ ನೋಡಿದ್ರೆ 'ನುಡಿ ಇಲ್ವೆ ಮಡಿ' ಅಂತ ಕಾಣುತ್ತೆ. ನಾನು ಮಾತು ಸುರ್ರು ಮಾಡೋ ವರೆಗೆ ಕಷ್ಟ. ಸುರ್ರಾಯ್ತು ಅಂದರೆ ನನ್ನ ಬಾಯಿ ಮುಚ್ಚೋದು ಗೊತ್ತೆ ಈ ಮಕ್ಕಳಿಗೆ? ನಮ್ಮಪ್ಪ, ತಿರುಪತಿ ತಿಮ್ಮಪ್ಪ, ಹಾಗೇನಾದ್ರು ಒಂದು ಸಮಯ ಒದಗಿಸಿ ಕೊಟ್ರೆ ಅಂದರೆ ಈ ಮಾನವ ಬುದ್ಧಿ ತೋರ್ಸಿಬಿಡ್ತೇನೆ.

**ವಿಕ್ರಮ:** (ಪುನಃ ಹಿಂದಕ್ಕೆ ಬಂದು) ಸ್ವಾಮಿ ಆಚಾರ್‍ರೆ! ಬನ್ನಿ ಬನ್ನಿ ತಡವಾಯ್ತು. ಸೂರ್‍ಯೋದಯದ ಮೊದಲೇ ತಮ್ಮ ಶುಭೋದಯವಾಗಲಿ. ಹೀಗೆ ಹೀಗೆ. (ತೆರಳುವರು.)

---

## ದೃಶ್ಯ ೩

[ಭೂಲೋಕದಲ್ಲಿಯ ಆಚಾರ್ಯನ ಮನೆ. ಆಚಾರ್ಯನ ಹೆಂಡತಿ ವೆಂಕಮ್ಮ ಪ್ರಾತಃಕಾಲದಲ್ಲಿ ಎದ್ದು ಮನೆಗೆಲಸಗಳನ್ನು ಮಾಡುತ್ತ, ಉದಯರಾಗ ಮಾಡುತ್ತಲಿದ್ದಾಳೆ. ಆಕೆಯ ಮಗ ಪುಟ್ಟು ಇನ್ನೂ ಮಲಗಿದ್ದಾನೆ.]

**ವೆಂಕಮ್ಮ:** (ಹಾಡನ್ನು ನಿಲ್ಲಿಸಿ) ಎಲಾ ಪುಟ್ಟೂ! ಪುಟ್ಟೂ, ಏಳಪ್ಪಾ ಹೊತ್ತಾಯ್ತು ನೋಡು. ಎಲ್ಲಾ ಮಕ್ಕಳು ಸಾಲೆಗೆ ಹೋಗ್ತಾ ಇದಾರೆ, ನೀನಿನ್ನೂ ಮಲಗಿದ್ದೀಯಾ! (ಪುನಃ ಸ್ವಲ್ಪ ಹಾಡಿ) ಅಣ್ಣಯ್ಯಾ ಏಳೋ

ಹೊತ್ತಾಯ್ತು. ಎದ್ದೊ—ನಿಮ್ಮಪ್ಪಾ ಅವರನ್ನೂ ಎಬ್ಬಿಸು. ಅವರಿಗಂತು ನಿದ್ರೆ ಅಂದರೆ ಆಗಿಹೋಯ್ತು. ಕಟ್ಟೇ ಹಿಡಿದು ಮಲಗಿದರೆಂದ್ರೆ ಕತ್ತೆ ಕೂಗಿದರೂ ಇಲ್ಲ, ನಾಯಿ ಬೊಗಳಿದರೂ ಇಲ್ಲ....ಅಣ್ಣಯ್ಯಾ ಏಳೋ. (ಓರ್ವ ಮುದುಕಿ, ಭಾಗೀರತಿಬಾಯಿ, ಪ್ರವೇಶಿಸುವಳು.)

**ಭಾಗೀರತಿಬಾಯಿ:** ಯಂಕವ್ಮಾ, ಓ ಯಂಕವ್ಮಾ.

**ವೆಂಕಮ್ಮ:** ಬರ್‍ರಿವ್ವಾ ಭಾಗೀರತಿ ಬಾಯಿ.

**ಭಾಗೀ:** ಏನೋ ಅಂದಿ, ಕೇಳಲೇ ಇಲ್ಲ. ಈ ಕಿವಿ ಬೇರೆ ಹಾಳಾಗಿ ಹೋಯ್ತು.

**ವೆಂಕಮ್ಮ:** (ಗಟ್ಟಿಯಾಗಿ) ಬರ್‍ರೀ ಅಂದೆ.

**ಭಾಗೀ:** ಬಂದೀನಿ. ಮುಸರೆ ಉಪ್ಗರಣೆ ಆಯ್ತೆ?

**ವೆಂಕಮ್ಮ:** ಆಗ್ತಾದೆ ಬರ್‍ರೀ. ಕೂತು ಕೊಳ್ರಿ.

**ಭಾಗೀ:** ಪುಟ್ಟಣ್ಣ ಇನ್ನೂ ಮಲಗ್ಯಾನೆ!

**ವೆಂಕಮ್ಮ:** ನಾನೇನು ಮಾಡ್ಲಿರೀ, ಹತ್ತು ಬಾರಿ ಎಬ್ಬಿಸಿದೆ.

**ಭಾಗೀ:** ಸಿನಿಮಾಕ್ಕೆ ಹೋಗಿದ್ನಾ? ಹೋಗಲಿ ಬಿಡ್ರಿ. ಅವರಪ್ಪ ಕಳಿಸ್ತಾನೆ, ಆತ ಹೋಗ್ತಾನೆ.

**ವೆಂಕಮ್ಮ:** ಸಿನಿಮಾ ಇಲ್ಲಾ ಏನೂ ಇಲ್ಲ.

**ಭಾಗೀ:** ಅಲ್ಲವ್ವಾ ನಿಮಗಂತೂ ಕಣ್ಣು ಕಾಣ್ತಾವೆ ನೀವೂ ಹೋಗಿದ್ರಿ. ಈಗ ನಮ್ಮನ್ನ ಹೋಗೂ ಅಂದರೆ ಹೋಗ್ತೀವಾ?

**ವೆಂಕಮ್ಮ:** ಇದೊಳ್ಳೇ ಕಿವಡಿ ಸಹವಾಸಾಯ್ತು.

**ಭಾಗೀ:** ಆಗಲಿ ನಾನೇ ಎಬ್ಬಿಸ್ತೇನೆ. ಏಳಪ್ಪಾ ಪುಟ್ಟಣ್ಣಾ ಏಳು. ನಿಮ್ಮಪ್ಪನ್ನ ನೋಡು ಬೆಳಗಾ ಮುಂಜಾನೆ ಎದ್ದಾರೆ.

**ವೆಂಕಮ್ಮ:** ಅಯ್ಯೋ ಬಡಕೊಂಡ್ಹಾಂಗೆ; ಅಲ್ಲಿ ನೋಡ್ರಿ, ಕಟ್ಟೆ ಹಿಡಿದು ಇನ್ನೂ ಮಲಗ್ಯಾರೆ.

**ಭಾಗೀ:** ಇದೇನೇ ನಮ್ಮವ್ವಾ! ಕಟ್ಟೆ ಖಾಲೀ ಅದೆ. ಮಲಗ್ಯಾರಂತ ಹೇಳ್ತೀರಿ. (ಪುಟ್ಟು ಏಳುವನು.) ನೋಡವ್ವಾ ಯಂಕವ್ಮಾ ನಾನು ಎಬ್ಬಿಸಿದರೆ ಎದ್ದಾನೆ ಪುಟ್ಟಣ್ಣ. ಸಿನಿಮಾ ನೆಟಗಿತ್ತೇನಪ್ಪಾ ಪುಟ್ಟಣ್ಣಾ?

**ಪುಟ್ಟು:** ಎಲ್ಲೀ ಸಿನಿಮಾ ಅಜ್ಜೀ?

**ಭಾಗೀ:** ನೆಟಗಿದ್ರೆ ಆಯ್ತಪ್ಪ. ನೀವು ಸಂತೋಷಪಟ್ಟರೆ ನಾವೂ

ನೋಡಿದ್ಹಾಂಗೆ.

**ಪುಟ್ಟು:** ಇದೊಳ್ಳೆ ಕರ್ಮದ ಮುದುಕಿ, ಕಿವುಡ್ಬೊಟ್ಟೆ.

**ಭಾಗೀ:** ಸಾಕು ಬಿಡೋ ನನ್ನಪ್ಪಾ, ಎಲ್ಲಾದ್ರು ದೊಡ್ಡೋನಾಗು. ನನ್ನೊ ಸಿನಿಮಾಕ್ಕೆ ಕರಕೊಂಡು ಹೋಗ್ತಾನಂತೆ ನೋಡವ್ವಾ ಯಂಕಮ್ಮ. ದೇವರಂಥಾ ಹುಡುಗ.

**ವೆಂಕಮ್ಮ:** ಪುಟ್ಟಣ್ಣಾ ಅವರು ಎಲ್ಲಿ ಹೋದ್ರು ನೋಡಪ್ಪಾ. ಅಲ್ಲಿ ಶೆಟ್ರ ಮನೆ ಹತ್ತಿರ ಇದ್ದಾರೇನೊ ನೋಡು. ಭಾಗೀರತಿಬಾಯಿ ಬಂದಾರೆ ಅಂತ ಹೇಳು.

**ಪುಟ್ಟು:** ನೋಡ್ತೀನವ್ಮಾ. (ಹೋಗುವನು.)

**ವೆಂಕಮ್ಮ:** ಪುಟ್ಟಣ್ಣನ್ನ ಕಳ್ಸೀನಿ, ಬರ್‍ತಾರೀಗ. ಕೂತುಕೊಳ್ಳಿ ಭಾಗೀರತಿ ಬಾಯಿ.

**ಭಾಗೀ:** ಪಲ್ಯಾಕಾಯಿ ತರೋದು ಎಷ್ಟು ಹೊತ್ತು, ಬರಲಿ. ಇವತ್ತು ದೇವರಿಗಿಷ್ಟು ನೈವೇದ್ಯ ಕೊಡೋಣ ಅಂತ ಅಂದ್ಕೊಂಡೆ. ಆಚಾರಿಷ್ಟು ಬಂದು ದೇವರ ತಲೇ ಮ್ಯಾಲಿಷ್ಟು ನೀರು ಹಾಕ್ಲೀ ಅಂತ ಹೇಳಿ ಹೋಗ್ಲಿಕ್ಕೆ ಬಂದೆ.

**ವೆಂಕಮ್ಮ:** ಸಂತೋಷ. ಇನ್ನೇನು ಸಮಾಚಾರ?

**ಭಾಗೀ:** ಏನದವ್ವಾ. ಅದ್ಯಾರೋ ಆಚಾರ್ರು ಬಂದಾರಂತೆ, ಪುರಾಣ ಹೇಳ್ಲಿಕ್ಕೆ.

**ವೆಂಕಮ್ಮ:** ಸಾಗಲಿ, ದೇವರ ಕೆಲಸ.

**ಭಾಗೀ:** ಅವರು ಹ್ಯಾಗೆ ಹೇಳ್ತಾರೆ ಅನ್ನೋದನ್ನ ಈಗಿನ ಕಾಲ್ದೋರು ನೀವು ಹೇಳ್ಬೇಕು. ನಮಗಂತೂ ನಿಮ್ಮ ಯಜಮಾನರ ಪುರಾಣ ಆದ್ಹಾಂಗೆ ಬ್ಯಾರೆ ಯಾರ್‍ದು ಆಗೋದಿಲ್ಲ.

**ವೆಂಕಮ್ಮ:** (ನಕ್ಕು) ಅಡಿಗೇನಾಗ್ಬೇಕು?

**ಭಾಗೀ:** ಏನು ಮಾಡ್ಲವ್ವಾ– ನಾವೆಲ್ಲ ಹಳೇ ಕಾಲ್ದವರು. ಬ್ಯಾಳ್ಯಾಗಿಷ್ಟು ಬೆಲ್ಲ ಹಾಕಿದರೆ ನಮ್ ಕೆಲಸ ಮುಗೀತು.

**ವೆಂಕಮ್ಮ:** ಉಪ್ಪು ಕಾರದ್ದು?

**ಭಾಗೀ:** ನಿನ್ನೆ ಒಂದಿಷ್ಟು ಚವುಳಿಕಾಯಿ ತಗೊಂಡೀನಿ. ಬೆಂಡಿಕಾಯಿ ಆವೆ. ಒಂದಿಷ್ಟು ಮಜ್ಜಿಗೆಹುಳಿ ಮಾಡ್ತೀನಿ. ಏನವ್ವಾ, ಮ್ಯಾಲಿಷ್ಟು

ಚಿತ್ರಾನ್ನ ಕಲಸ್ತೀನಿ.

**ವೆಂಕಮ್ಮ:** ಅಲ್ಲ ಭಾಗೀರತಿಬಾಯಿ, ಮೊನ್ನೆ ನೀವೊಂದು ದೇವರ ನಾಮ ಹೇಳಿದಿರಲ್ಲ ಅದನ್ನೊಮ್ಮೆ ಹಾಡ್ರಿ.

**ಭಾಗೀ:** ಅಯ್ಯೋ ನಮ್ಮ ಹಳೇ ಹಾಡು ತಗೊಂಡೇನು ಮಾಡ್ತೀಯಮ್ಮಾ? ನಮ್ಗೇನು ರಾಗೇ, ತಾಳೇ !

**ವೆಂಕಮ್ಮ:** ಈಗಿನ ಕಾಲ್ದೋರಿಗೆ ನಿಮ್ಹಾಗೆಲ್ಲಿ ಹಾಡ್ಲಿಕ್ಕೆ ಬರ್ತಾದ್ರೀ? ಎಲ್ಲರು ಸಿನಿಮಾ ಹಾಡಿನೋರು. ಅದೇ ದೇವರ ನಾಮ ಹಾಡ್ರಿ. ನಮಗೆ ನೀವೇ ಸೈ.

**ಭಾಗೀ:** ಹೊತ್ತಾಗ್ತದೆ ಯೆಂಕಮ್ಮಾ.

**ವೆಂಕಮ್ಮ:** ಅಂದು ಬಿಡ್ರಿ. ಪುಟ್ಟಣ್ಣ ಬರೋದ್ರಾಗೆ ಆಗ್ತದೆ.

**ಭಾಗೀ:** (ಹಾಡುವಳು.)

**ರೈತ:** (ತೆರೆಯಿಂದಲೇ) ಅಪ್ಪಾ ಅವ್ರೇ.

**ವೆಂಕಮ್ಮ:** ಯಾರದೂ?

**ಭಾಗೀ:** ಸಾಕಾದ್ರೆ ಬಿಡ್ರಿ. ಇದು ದೊಡ್ಡ ಹಾಡು. ಆಚಾರ್ರು ಬಂದ್ರಾ?

**ವೆಂಕಮ್ಮ:** ಇನ್ನೂ ಇಲ್ಲ. (ರೈತನನ್ನು ಕುರಿತು) ಯಾರದು?

**ರೈತ:** ನಾವಮ್ಮಾ ಹಳ್ಳಿಯವರು. ಅಪ್ಪಾ ಅವರ ತಾವ ಬಂದೀವಿ.

**ವೆಂಕಮ್ಮ:** ಒಳಾಕೆ ಬಂದು ಕೂತುಕೊಳ್ಳಪ್ಪಾ, ಬರ್ತಾರೀಗ. (ರೈತ ಪ್ರವೇಶಿಸಿ ಕೂತುಕೊಳ್ಳುವನು.)

**ಪುಟ್ಟು:** (ಪ್ರವೇಶಿಸಿ) ಅಮ್ಮಾ! ಅಲ್ಲಿ ಇಲ್ಲಮ್ಮ.

**ವೆಂಕಮ್ಮ:** ನೋಡಣ್ಣಾ, ಇನ್ನೊಮ್ಮೆ ನೋಡು. ಹಳ್ಳಿಯವರೂ ಬಂದಾರಂತ ಹೇಳು. (ಪುಟ್ಟು ಹೋಗುವನು. ಬೇರೊಬ್ಬ ರೈತ, ಹನುಮಣ್ಣ, ಪ್ರವೇಶಿಸುವನು.)

**ಹನುಮ:** ಅಮ್ಮಾ! ಅಪ್ಪಾ ಅವರು ಅದಾರಾ?

**ವೆಂಕಮ್ಮ:** ಬಾ ಹನುಮಣ್ಣಾ ಬಾ. ಕೂತುಕೊ. ಏನು ಬಂದಿದ್ದೀ?

**ಹನುಮ:** ಹೊತ್ತಿಗೆ ಕೇಳಿಸಲಿಕ್ಕೆ ಬಂದಿದ್ದೆನಮ್ಮ.

**ವೆಂಕಮ್ಮ:** ಹೊರಗೆ ಎಲ್ಲಿಗೋ ಹೋಗ್ಯಾರೆ, ಬರ್ತಾರೀಗ ಕೂತುಕೊ.

**ಭಾಗೀ:** ನಾನು ಹೋಗ್ತೀನ್ರವ್ವಾ. ಆಚಾರ್ರು ಬಂದ ಘಳಿಗ್ಗೆ ಹೇಳ್ರಿ. ನಾನೂ ಬ್ಯಾಗನೆ ಸ್ನಾನಮಾಡ್ತೀನಿ.

**ವೆಂಕಮ್ಮ:** ಹೇಳ್ತೀನ್ರವ್ವಾ ಹೇಳ್ತೀನಿ. (ಭಾಗೀರತಿಬಾಯಿ ತೆರಳುವಳು.)

**ರೈತ:** ಯಾವೂರಪ್ಪಾ ಯಜಮಾನ?

**ಹನುಮ:** ನಮ್ದು ಇದೇ ಊರು. ನಿಮ್ದು ಯಾವೂರು?

**ರೈತ:** ನಮ್ದು ಇಲ್ಲೇ ಮಾದಾಪುರ. ಲಗ್ನಾ ಕಟ್ಸಾಕಂತ ಬಂದಿದ್ದೆ.

**ಹನುಮ:** ನಿಮ್ಕಡೆ ಮಳೆ ಆಗೇತೇನಣ್ಣಾ?

**ರೈತ:** ಹಸಿಮಳೆ ಆಗೈತೆ. ಕೆಲವರು ಬಿತ್ತಾಕೂ ಸುರುವು ಮಾಡ್ಯಾರೆ.

**ಹನುಮ:** ನಾವೂನು ಬಿತ್ತೋಕೆ ಹಚ್ಬೇಕು. ದಿವಸ ಕೇಳ್ಕೊಂಡು ಹಚ್ಕೋಣ ಅಂತ ಬಂದೀನಿ. (ಇಬ್ಬರೂ ಅಡಿಕೆ ಎಲೆ ತಿನ್ನುತ್ತ ಕುಳಿತು ಕೊಳ್ಳುವರು.)

**ಪುಟ್ಟು:** (ಪ್ರವೇಶಿಸಿ) ಅಲ್ಲೆಲ್ಲಿ ಇಲ್ಲವ್ಮಾ, ಯಾರ ಮನೇಗೆ ಹೋಗಿ ದಾರೇನೊ.

**ವೆಂಕಮ್ಮ:** ಅಲ್ಲಿ ತೋಟದ ಹತ್ತಿರ ನೋಡಪ್ಪ.

**ಪುಟ್ಟು:** ನಾನು ಬರ್ತಾ ಹಾಗೇ ಹಾದು ಬಂದೆನಮ್ಮ. ಸಾವುಕಾರು ಬಾವಿ ಹತ್ತಿರ ಪಂಚೆ ತೊಳಿತಾರೇನೊ ಅಂತ ನೋಡಿದೆ. ಅಲ್ಲಿ ಕೂಡ ಇಲ್ಲ.

**ವೆಂಕಮ್ಮ:** ಸರಿ ಬಿಡಪ್ಪ. ಇನ್ನೆಲ್ಲಿಗೆ ಹೋದ್ರೋ ಏನೊ. ಪೇಟೆ ಯಲ್ಲಿ ಒಬ್ಬರು 'ಬಾಗಿನ ಕೊಡ್ತೇವೆ, ಎದ್ದು ಕೂಡಲೆ ಹುಡುಗನ್ನೂ ಕರ ಕೊಂಡು ಬನ್ನಿ' ಅಂತ ಹೇಳಿದ್ದರು. ನಾವಿಬ್ಬರೂ ಹೋದರೆ ಮನೆಮುಂದೆ ಯಾರಿಲ್ಲ.

**ಪುಟ್ಟು:** ಹೋಗೋಣ ನಡಿಯಮ್ಮಾ, ಇವರಿಬ್ಬರೂ ಹೊರಗೆ ಕೂತಿರ್ತಾರೆ.

**ಹನುಮ:** ನೀವು ಎಲ್ಲಿಗಾದ್ರು ಹೋಗೋ ಹಾಂಗಿದ್ರೆ ಹೋಗಿ ಬನ್ರವ್ಮಾ. ಕದಾ ಹಾಕಿ ಬಿಡ್ರಿ. ನಾವು ಇಲ್ಲೇ ಹೊರಗೆ ಕಟ್ಟೇ ಮೇಲೆ ಕುಂತಿರ್ತೇವೆ.

**ರೈತ:** ಅವ್ವಾ ಅವರೆ, ದಾರ್‍ಯಾಗೆ ಎಲ್ಲಾದ್ರು ಅಪ್ಪಾ ಅವರು ಸಿಕ್ಕರೆ ನಾವು ಬಂದೀವಂತ ಹೇಳ್ರಮ್ಮ. ಜಲ್ದೀ ಹೋಗೋಕೈತೆ ನಮಗೆ. (ಇಬ್ಬರೂ

 No. 28

ಹೊರಗೆ ಹೋಗುವರು.)

**ವೆಂಕಮ್ಮ:** ಹಂಗೇ ಮಾಡಪ್ಪ ಹೇಳ್ತೀನಿ. (ಪುಟ್ಟುವನ್ನು ಕುರಿತು) ಬಾ ಅಣ್ಣ, ಹೋಗಿ ಬೇಗನೆ ಬಂದು ಬಿಡೋಣ. (ಮುಂದುವರಿದು ಬರುವರು. ರಾಜಮಾರ್ಗದ ತೆರೆ ಬೀಳುವುದು.)

**ಪುಟ್ಟು:** ಅವ್ಮಾ! ಅಲ್ಲಿ ಸಾಲಿ ಮುಂದೆ ಹೋದರೆ ಮಾಸ್ಟರು ಬೈತಾರಮ್ಮ.

**ವೆಂಕಮ್ಮ:** ಇಲ್ಲ ಬಾಪ್ಪ. ಮೇಸ್ಟ್ರು ಕಂಡರೆ ನಾನು ಹೇಳ್ತೀನೆ ಬಾ, ಮಧ್ಯಾನ್ನಕ್ಕೆ ಬರ್ತಾನೆ ಮಾಸ್ಟರೇ ಅಂತ.

**ಪುಟ್ಟು:** ಮಧ್ಯಾನ್ನಕ್ಕೂ ಬೇಡವ್ಮ. ನಾಳೆ ಬರ್ತಾನಂತ ಹೇಳು. ಅಷ್ಟು ದೂರ ಹೋಗಿ ಬಂದು ನಾನಂತೂ ಸಾಲಿಗೆ ಹೋಗೋದಿಲ್ಲ ನೋಡು.

**ವೆಂಕಮ್ಮ:** ಸರಿ ಬಾಪ್ಪ. ನಮಗ್ಯಾಕೆ ಸಾಲೆ. ಕೈಯಲ್ಲಿ ಪಂಚಾಂಗ ಗಟ್ಟಿ ಇದ್ದರೆ ಸಾಕು.

(ಇಬ್ಬರೂ ತೆರಳುವರು.)

---

## ದೃಶ್ಯ ೪

[ಯಮಧರ್ಮನ ಆಸ್ಥಾನ. ಯಮನು ಆಸನಾರೂಢನಾಗಿ ಒಂದು ಪತ್ರವನ್ನು ಓದುತ್ತಲಿದ್ದಾನೆ. ಪಕ್ಕದಲ್ಲಿ ಒಬ್ಬ ಸೇವಕನು ಕೆಲವು ಪತ್ರಗಳನ್ನು ಹಿಡಿದುಕೊಂಡು ನಿಂತಿದ್ದಾನೆ. ಮುಂಭಾಗದಲ್ಲಿ ಮಂತ್ರಿ ಚಿತ್ರಗುಪ್ತನು ಕುಳಿತುಕೊಂಡಿದ್ದಾನೆ.]

**ಯಮ:** ಮಾನ್ಯ ಮಂತ್ರಿ ಚಿತ್ರಗುಪ್ತರೇ! ಪರಮೇಶ್ವರನಿಂದ ಬಂದಿರುವ ಈ ಹೊಸ ಸಂದೇಶವನ್ನು ನೋಡಿದಿರಾ ಹೇಗಿದೆ! ಕೇಳಿ-(ಓದುವನು)

'ತನ್ನಾಡಳಿತೆಯಲ್ಲಿರುವ ಮರಣಕಚೇರಿಯ ಸಮಸ್ತ ಅಧಿಕಾರಿಗಳಿಗೂ ಕೈಲಾಸದಿಂದ ಶಂಕರನು ಈ ಮೂಲಕ ತಿಳಿಪಡಿಸುವುದೇನೆಂದರೆ— ಯಾವ ಪ್ರಾಣಿಯೇ ಆಗಿರಲಿ, ಮರಣ ಕಾಲದಲ್ಲಿ ಶಿವನಾಮವನ್ನು ಜಪಿಸುತ್ತ ಪ್ರಾಣತ್ಯಾಗ ಮಾಡಿದರೆ ಶಿವದೂತರ ಹೊರತು ಬೇರೆಯವರಾರೂ

ಆ ಪ್ರಾಣಿಯನ್ನು ಮುಟ್ಟಲಾಗದು. ಆವೊಂದು ಶಿವಸ್ತುತಿಯಿಂದ ಹಿಂದಿನ ಅನಂತ ಕೋಟಿ ಪಾಪಗಳು ಪರಿಹಾರವಾಗಿ ಶಿವಸಾಯುಜ್ಯವನ್ನು ಪಡೆಯುವ ಅಧಿಕಾರವನ್ನು ಆ ಪ್ರಾಣಿಯು ಹೊಂದುತ್ತದೆ. ಅರಿತೋ ಅರಿಯದೆಯೋ ಅಂಥಾ ಪ್ರಾಣಿಯನ್ನು ದಂಡನೆಗೆ ಗುರಿಪಡಿಸುವ ಮರಣ ಕಚೇರಿಯ ಅಧಿಕಾರಿಗಳು ಶಿಕ್ಷೆಗೀಡಾಗುತ್ತಾರೆ. ಈ ಕಾನೂನು ಇಂದಿನಿಂದಲೇ ಜಾರಿಯಲ್ಲಿ ಬಂದಿದೆ. ಹೀಗೆಂದು **—ಶಂಕರ.**"

ಭೇಷ್, ನೋಡಿ ಚಿತ್ರಗುಪ್ತರೆ, ಇನ್ನು ಮೇಲೆ ನಮಗೆಷ್ಟು ಕೆಲಸ ಕಡಮೆಯಾಗಬಹುದು. ಈ ಪ್ರಕಟನೆಯು ಮಾನವರಿಗೆ ತಿಳಿಯಿತೆಂದರೆ ಅವರಾರೂ ನಮ್ಮಲ್ಲಿಗೆ ಬರಲಿಕ್ಕಿಲ್ಲ. ಆದಷ್ಟು ಕೆಲಸ ಕಡಮೆಯಾದರೆ ನಾವೆಲ್ಲರೂ ವಿಶ್ರಾಂತಿಯನ್ನು ಹೊಂದಬಹುದಲ್ಲವೆ?

**ಚಿತ್ರಗುಪ್ತ:** ಇದೊಳ್ಳೆಯ ಕೆಲಸ. ಈ ಪ್ರಕಟನೆಯಲ್ಲೇನೋ ಮೋಸವಿರಬೇಕು.

**ಯಮ:** ಮೋಸವೆ? ಅದು ಹೇಗೆ ಚಿತ್ರಗುಪ್ತರೆ?

**ಚಿತ್ರಗುಪ್ತ:** ನೋಡೀ, ಇನ್ನು ಮೇಲೆ ನಮ್ಮಲ್ಲಿ ಕೆಲಸ ಕಡಮೆಯೆಂದು ಕೆಲವರನ್ನು ಸ್ಥಾನಚ್ಯುತರನ್ನಾಗಿ ಮಾಡುತ್ತಾರೆ. ತಮ್ಮಲ್ಲಿ ಕೆಲಸವಧಿಕವಾಗಿದೆ ಎಂದು, ತಮಗೆ ಬೇಕಾದ ವ್ಯಕ್ತಿಗಳಿಗೆ ಕೆಲಸಗಳನ್ನು ದಯಪಾಲಿಸುತ್ತಾರೆ, ಕೀರ್ತಿಗಳಿಸುತ್ತಾರೆ. ಸಾಯುವ ಪರ್ಯಂತ ಕೊಲೆ ಸುಲಿಗೆ ದರೋಡೆ ಮೊದಲಾದ ಅನಂತಾನಂತ ಪಾತಕಗಳನ್ನು ಮಾಡಿದ ವ್ಯಕ್ತಿಗೂ ಇವರ ನಾಮಸ್ಮರಣೆಯಿಂದ ಶಿಕ್ಷೆ ತಪ್ಪುತ್ತದೆಂದರೆ ಇನ್ನು ನಾವೇಕೆ? ನಮ್ಮ ಕಚೇರಿ ಏಕೆ? ಈ ರೀತಿಯ ಪ್ರಕಟನೆಗಳು ಬರಲಾರಂಭಿಸಿದರೆ ಸ್ಥಾನಮಾನವಿಲ್ಲದ ಇಂಥಾ ಕೆಲಸದಿಂದ ನಾವು ನಿವೃತ್ತರಾಗುವುದು ಮೇಲು.

**ಯಮ:** ಹಾಗಲ್ಲ ಚಿತ್ರಗುಪ್ತರೆ; ವಿಚಾರ ಮಾಡದೆ ಶಂಕರನಾವ ಕೆಲಸವನ್ನೂ ಮಾಡಲಿಕ್ಕಿಲ್ಲವೆಂದು ನನ್ನ ವಿಶ್ವಾಸ.

**ಚಿತ್ರಗುಪ್ತ:** ತಮ್ಮ ವಿಶ್ವಾಸವಂತಿರಲಿ. ನಮಗೊಂದು ವ್ಯಕ್ತಿತ್ವ ಬೇಡವೆ? ಅಧಿಕಾರ ಬೇಡವೆ? ಶಂಕರನು ಸ್ವತಃ ಯೋಚನೆ ಮಾಡುವುದು ಬಹಳ ಕಡಮೆಯೆಂದು ಕಾಣುತ್ತದೆ. ಆತನೊಡ್ಡೋಲಗದ ಒಂದು ಕ್ಷುದ್ರ ಪ್ರಾಣಿ ಏನಾದರೊಂದು ಕಾನೂನನ್ನು ಸೂಚಿಸಿದರೆ ಸಾಕು. ಅದು ಅಂದೇ ಜಾರಿಯಲ್ಲಿ ಬರುತ್ತೆ. ಆಗಂಗೆಗೆ ಉಂಟುಮಾಡಿಕೊಟ್ಟಿರುವ ಪ್ರಾಶಸ್ತ್ಯವನ್ನು

ನೋಡಿ– ಪಂಚಮಹಾಪಾತಕಗಳನ್ನು ಮಾಡಿದವನೊಬ್ಬನು ಅವಳಲ್ಲಿ ಧುಮಿಕಿ ಆತ್ಮಹತ್ಯ ಮಾಡಿಕೊಂಡರೂ ಅವಳ ಪ್ರಭಾವದಿಂದ ಅವನಿಗೆ ಕೈಲಾಸವಾಸವಂತೆ! ಹೇಗಿದೆ ಮೇಲಧಿಕಾರಿಗಳ ಸ್ವೇಚ್ಛಾಚಾರ!

**ಯಮ:** ಸಚಿವೋತ್ತಮರೆ! ಮಾಡುವುದೇನು? ಯೋಚನೆಮಾಡಿ ನೋಡಿ. ಅವರು ಜಗನ್ನಿಯಾಮಕರು. ಅವರ ಆಜ್ಞಾನುಕಾರಿಗಳು ನಾವು. ಅವರು ನುಡಿದಂತೆ ನಡೆವುದೇ ನಮ್ಮ ಧರ್ಮ. ಅವರ ಕಾರ್ಯಗಳ ಮೇಲೆ ನಮ್ಮ ವಿಮರ್ಶೆಯೆ? ಅಲ್ಲದೆ ನೀವಾಡಿದಂತೆ ನಾನೂ ಆಡಲು ಬರುತ್ತದೆಯೆ?

**ಚಿತ್ರಗುಪ್ತ:** ಸಹಜ. ತಾವಾಡಿದ ಮಾತು ಸಹಜ. ಆದರೆ ಒಡ್ಡು ಇಲ್ಲದೆ ಹೋದರೆ ಪ್ರವಾಹವು ಹರಿದೇ ಹರಿಯುತ್ತದೆಂಬುದನ್ನು ಮರೆಯ ಲಾಗದು.

**ಯಮ:** ಆದರೆ ಆ ಪ್ರವಾಹಕ್ಕೆ ಒಡ್ಡು ಕಟ್ಟುವ ಶಕ್ತಿ ನಮ್ಮಲ್ಲಿ ದೆಯೆ? ಇಲ್ಲ.

**ಚಿತ್ರಗುಪ್ತ:** ಸರಿ, ಸರಿ. ಅರ್ಥವಾಯಿತು. (ಯಮನು ಬೇರೆ ಪತ್ರವನ್ನು ತೆಗೆದುಕೊಳ್ಳುವನು.) (ಸ್ವಗತ) ಇಂಥಾ ಹೇಡಿಗಳು ಆಡ ಳತೆಯನ್ನು ವಹಿಸಿದರೆ ಹೀಗೇ ಆಗಬೇಕಾದುದು. ತನ್ನ ಕೆಲಸವನ್ನು ತಾನು ಯೋಗ್ಯ ರೀತಿಯಲ್ಲಿ ಮಾಡುವುದಾದರೆ ಮೇಲಧಿಕಾರಿಗಳಿಗೆ ಹೀಗೆ ಅಂಜು ವನೆ? ಅಂಜುಗುಳಿ. ಇಂಥವರ ಸೇವೆ ಮಾಡಿ ಹೊಟ್ಟೆ ಹೊರೆಯುವುದು ನಮ್ಮ ಪೂರ್ವಾರ್ಜಿತ. ಇದೆಂದು ತಪ್ಪುವುದೋ ನಾನೆಂದು ಸುಖಿಸುವೆನೊ.

(ಚಂಡ ವಿಕ್ರಮರು ಆಚಾರ್ಯನನ್ನೊಡಗೂಡಿ ಪ್ರವೇಶಿಸುವರು.)

**ಚಂಡ,ವಿಕ್ರಮ:** ಮಹಾರಾಜರಿಗೆ ವಿಜಯವಾಗಲಿ.

(ಯಮನು ಕಣ್ಣುಸನ್ನೆಯಿಂದ ಅವರಿಗೆ ಮೌನವಾಗಿರಲು ಸೂಚಿಸು ವನು. ಚಿತ್ರಗುಪ್ತನು ಆಚಾರ್ಯನನ್ನು ನೋಡಿ ಆಶ್ಚರ್ಯಗೊಂಡು ಶಂಕಿಸುವನು.)

**ಯಮ:** (ಸೇವಕನನ್ನು ಕುರಿತು) ಎಲೋ! ಆ ಪತ್ರವನ್ನು ಹೀಗೆ ಕೊಡು. (ಪತ್ರವನ್ನು ತೆಗೆದು ನೋಡಿ) ಇದು ದೇವೇಂದ್ರನಿಂದ– 'ದೇವ ಲೋಕದಲ್ಲಿ ದೇವತೆಗಳೆಲ್ಲರೂ ಮುಂಬರುವ ವಾರದಲ್ಲಿ ಆಚರಿಸಲಿರುವ

ಮಹಾಪೂಜೆಯಲ್ಲಿ ಯಮಧರ್ಮನೂ ಪರಿವಾರ ಸಮೇತನಾಗಿ ಭಾಗವಹಿಸ ಬೇಕು'— ಸಂತೋಷದಾಯಕವಾದ ವಿಷಯ. (ಉಳಿದ ಒಂದೆರಡು ಪತ್ರ ಗಳನ್ನು ನೋಡಿ) ಸರಿ, ಸಚಿವೋತ್ತಮರೆ! ಇಂದಿನ ಚರ್ಚೆಯನ್ನು ನಾಳೆ ಮುಂದುವರಿಸುವ; ಈಗ ನಾನು ಬೇರೆ ಕೆಲಸಗಳಿಗೆ ಗಮನ ಕೊಡಬೇಕಾ ಗಿದೆ. ತಾವಿನ್ನು ಹೊರಡಬಹುದು.

**ಚಿತ್ರಗುಪ್ತ:** (ಜಿಗುಪ್ಸೆಯಿಂದ) ಮಹದಪ್ಪಣೆ. (ವಂದಿಸಿ ಮುಂ ದಕ್ಕೆ ಬಂದು) 'ಈಗ ಬೇರೆ ಕೆಲಸಗಳಿಗೆ ಗಮನ ಕೊಡಬೇಕಾಗಿದೆ'— ಅಲ್ಲವೆ? ಮೂರ್ಖ. (ತೆರಳುವನು.)

**ಯಮ:** (ಸೇವಕನನ್ನು ಕುರಿತು) ಎಲೋ, ಈ ಎಲ್ಲ ಪತ್ರಗಳನ್ನು ಪತ್ರವ್ಯವಹಾರ ಶಾಖೆಯಲ್ಲಿ ಅಧಿಕಾರಿಗಳಿಗೆ ಒಪ್ಪಿಸಿ ಹಿಂದಿರುಗಿ ಬಂದು ಮಹಾದ್ವಾರದ ಬಳಿ ನಮಗಾಗಿ ಕಾದಿರು. ನೀನಿಲ್ಲಿಗೆ ಪುನಃ ಬರ ಬೇಕಾದುದಿಲ್ಲ.

**ಸೇವಕ:** ಮಹದಪ್ಪಣೆ. (ವಂದಿಸಿ ತೆರಳುವನು.)

(ಆಚಾರ್ಯನು ಆಶ್ಚರ್ಯದಿಂದ ಒಮ್ಮೆ ಮಂದಿರದ ನಾನಾ ಭಾಗಗಳನ್ನೂ ಒಮ್ಮೆ ಯಮನನ್ನೂ ನೋಡುತ್ತ ನಿಂತಿರುತ್ತಾನೆ.)

**ಯಮ:** (ಚಂಡ ವಿಕ್ರಮರನ್ನು ಸನ್ನೆ ಮಾಡಿ ಕರೆದು) ಪರಿಶೋಧನೆ ಮಾಡಿ ತಂದಿರುವಿರಾ ಈ ಪ್ರಾಣಿಯನ್ನು?

**ವಿಕ್ರಮ:** ಪ್ರಭೂ, ಪರಿಶೋಧನೆಯೆಂದರೆ ಹೇಳೋಕೆ ಬರೋಂತಿಲ್ಲ. ನಮಗಿದ್ದ ಮೆದುಳನ್ನೆಲ್ಲಾ ಇದೊಂದೇ ಕೆಲಸಕ್ಕೆ ವೆಚ್ಚಮಾಡಿದೇವೆ. ನನ್ನ ತಲೆ ಈ ಚಂಡನ ಮೈ ಎರಡೂ ಸವೆದು ಹೋಗಿವೆ. ಇಷ್ಟಾದ್ರು ತಮ್ಸೇವೆ ಮಾಡೋದ್ರಲ್ಲಿ ಒದಗಿದೆವಲ್ಲಾ ಅಂತ ನಮ್ಗೆ ಸಂತೋಷ. ಅಲ್ವೇನೊ ಚಂಡಾ?

**ಚಂಡ:** ಸತ್ಯದ ಮಾತ್ನಾಡ್ತಿ ಅಣ್ಣ. ಅಪ್ಪಾ ಅವರ್ಗೆ ನಮ್ಮ ಕೆಲಸ ಮೆಚ್ಚಿಗೆಯಾದ್ರೆ....

**ವಿಕ್ರಮ:** ಅದು ನಮ್ ಪುಣ್ಯ.

**ಚಂಡ:** ಅವರ ಕೆಲಸ ಜೈ ಭೇರಿ ಹೊಡದ್ರೆ....

**ವಿಕ್ರಮ:** ನಮ್ಮಾನಂದ.

**ಯಮ:** ಭೇಷ್ ಭೇಷ್. ಸೇವಕರೆಂದರೆ ನೀವೇ. ಇಷ್ಟು ಶೀಘ್ರವಾಗಿ ಹಿಂದಿರುಗಿ ಬಂದುದು ಮೆಚ್ಚುವಂಥ ವಿಷಯ. ಒಳ್ಳೇದು, ಆ ಮನುಷ್ಯನನ್ನು ಸ್ವಲ್ಪ ಹೀಗೆ ಬರಮಾಡಿ, ನೀವು ಸ್ವಲ್ಪ ಹಿಂದಕ್ಕೆ ಸರಿಯಿರಿ, ನೋಡುವ.

**ವಿಕ್ರಮ:** (ಆಚಾರ್ಯನಿಗೆ ಕಣ್ಣು ಸನ್ನೆ ಮಾಡಿ) ಇಗೋ ಹೀಗೆ ಬಾ. ಪ್ರಭುಗಳ ಆಜ್ಞೆಯಾಗಿದೆ. ಇಲ್ಲಿ ನಿಲ್ಲು. ಕಾಲ್ಜೋಡಿಸೊ; ಮುಖ ಮೇಲಕ್ಕೆತ್ತು–ಹಾಗೇ. ಇದು ಮರಣ ಕಚೇರಿ. ಯಮಧರ್ಮ ಪ್ರಭು ಹೀಗಿದ್ದಾರೆ. ಪ್ರಶ್ನೆಗುತ್ತರಾ ಯೋಚನೆಮಾಡಿ ಕೊಡು.

(ಯಮನು ಸ್ವಲ್ಪ ಸಮಯ ಆಚಾರ್ಯನನ್ನು ನೋಡುತ್ತ ನಿಲ್ಲುವನು. ಆಚಾರ್ಯನು ಸಹಾ ದಿಟ್ಟನಾಗಿ ಯಮನನ್ನೇ ಗಂಭೀರವಾಗಿ ನೋಡುವನು.)

**ಯಮ:** (ಸ್ವಗತ) ಚನ್ನಾಗಿದೆ ಪ್ರಾಣಿ. ದಿಟ್ಟತನದಿಂದ ನೋಡಲೂ ಬಲ್ಲದು. ನಮ್ಮ ಪರಿಚಯವಿನ್ನೂ ಆಗಿಲ್ಲ. ಪಾಪ. ಮಾತನಾಡಿಸಿ ನೋಡುತ್ತೇನೆ. (ಗಂಭೀರ ಸ್ವರದಿಂದ) ಏ ಮಾನವನೆ! ನಾವಾರೆಂದು ಬಲ್ಲೆಯಾ?

**ಆಚಾರ್ಯ:** ಬಲ್ಲೆ, ಚನ್ನಾಗಿ ಬಲ್ಲೆ. ಪಾಪಿಗಳ ಆಗಮನವನ್ನು ಕಾದು ಕುಳಿತಿರುವ ವ್ಯಕ್ತಿಯೆಂದೂ ಶಂಕರನ ಕಿಂಕರನೆಂದೂ ಬಲ್ಲೆ.

**ಯಮ:** ಹೂಂ. ಮದದಿಂದ ಕಣ್ಮುಚ್ಚಿ ನುಡಿಯುತ್ತಲಿರುವಿಯಾ? ಇಲ್ಲವೆ ಆಸ್ಥಾನದ ಮಾನ ಮರ್ಯಾದೆಗಳೆ ಗೊತ್ತಿಲ್ಲವೆ?

**ಆಚಾರ್ಯ:** (ದರ್ಪದಿಂದ ಕೂಡಿದ ನಗೆಯಿಂದ) ಮದದಿಂದ ಕಣ್ಮುಚ್ಚಿದವರಾರೆಂದು ನಿನ್ನ ಮಾತೇ ಹೇಳುವುದಿಲ್ಲವೆ? ಭೂಸುರೋತ್ತಮರಾದ ನಮ್ಮನ್ನು 'ಏ ಮಾನವಾ' ಎಂದು ಸಂಬೋಧಿಸುವುದೆ? ಎಂಥಾ ಮಾನ! ಎಂಥಾ ಮರ್ಯಾದೆ !!

**ಯಮ:** ಧರ್ಮಾಧರ್ಮದ ಪರಿಜ್ಞಾನವೇ ಇಲ್ಲದಂತಿದೆ ಇವನಿಗೆ.

**ಆಚಾರ್ಯ:** ಧರ್ಮನಿಗೆ ಧರ್ಮದ ಪರಿಜ್ಞಾನವಿಲ್ಲವೆಂಬುದನ್ನು ಈಗ ಚನ್ನಾಗಿ ಅರಿತಂತಾಯಿತು. ಲೋಕಕಲ್ಯಾಣಾರ್ಥವಾಗಿ ಭೂಲೋಕ

ದಲ್ಲವತರಿಸಿ, ಹರಿನಾಮ ಸ್ಮರಣೆ ಮಾಡುತ್ತಲಿರುವ ನಮ್ಮಂಥವರಿಗೆ ಎಂಥಾ ಸ್ವಾಗತ! ಎಂಥಾ ಸತ್ಕಾರ!! ಯಾರು ಪರಹಿತ ಚಿಂತನಾ ತತ್ಪರರೋ, ಯಾರನ್ನು ಕಂಡು ಕಾಮಕ್ರೋಧಾದಿಗಳು ಸಹಾ ದೂರ ಸರಿಯುತ್ತವೆಯೋ, ಯಾರಿಂದ ದೇವತೆಗಳಿಗೆ ತೃಪ್ತಿಯೋ, ಯಾರಿಗೆ ಇಷ್ಟಾರ್ಥಗಳು ಸಿದ್ಧಿಸಿರುವುವೋ, ಯಾರ ಹಿತಚಿಂತನೆಯನ್ನು ಹರಿಹರ ಬ್ರಹ್ಮಾದಿಗಳು ಅಹೋರಾತ್ರಿ ಮಾಡುತ್ತಲಿರುವರೋ, ಯಾರಲ್ಲಿ ಮಮಕಾರವಿಲ್ಲವೋ ಅಂಥವರಿಗೆ ಈ ದಂಡಧರನು ತೋರಿಸುವ ಸನ್ಮಾನವಿದು!

**ಯಮ:** ಲೋ ವಾಚಾಳಿ! ಅಲ್ಪ ಜೀವಿಗಳ ಕ್ಷುದ್ರ ಬುದ್ಧಿಯನ್ನು ತೋರಿಸಬೇಡ.

**ಆಚಾರ್ಯ:** ನಿನ್ನದೊಂದು ಅಲ್ಪ ಕಾರ್ಯವನ್ನು ನೆರವೇರಿಸಿಕೊಳ್ಳಲು ಕ್ಷುದ್ರ ಮಾರ್ಗದಿಂದ ನಮ್ಮನ್ನು ಬರ ಮಾಡಿಕೊಂಡು ಮದೋನ್ಮತ್ತನಾಗಿ ಗಳಹುತ್ತಲಿರುವ ನೀನು ವಿವೇಕ ವಿಕಳನಾದಂತಿದೆ.

**ಯಮ:** ಮುಚ್ಚೋಬಾಯ್. ಮೂರ್ಖ. ನನ್ನ ನೂತನ ಸಂಶೋಧನೆಯೊಂದರಲ್ಲಿ ಉಪಯುಕ್ತವಾಗಲೆಂದು ಹಿಡಿದೆಳೆದು ತರಿಸಿದ ನಿನ್ನನ್ನು ಕೊಲ್ಲಿಸಬಾರದೆಂದು ಕ್ಷಮಿಸಿದ್ದೇನೆ. ಇಲ್ಲವಾದರೆ ನಿಮಿಷಾರ್ಧದಲ್ಲಿ ನಿನ್ನನ್ನು ಗಾಣಕ್ಕಿಟ್ಟು ತಿರುವಿ ಭೂತಗಳ ಮರಿಗಳಿಗೆ ನಿನ್ನ ರಕ್ತದ ರುಚಿಯನ್ನು ನೋಡಿಸುತ್ತಿದ್ದೆ.

**ಆಚಾರ್ಯ:** ಮಹಾ ಸಾಹಸಿ. ಯಾರು, ಏನೆಂಬ ವಿವೇಚನೆಯಿಲ್ಲದೆ ಬಾಯ್ಗೆ ಬಂದಂತೆ ನುಡಿಯುತ್ತಲಿಹನು. ತನ್ನ ಕಾರ್ಯದಲ್ಲಿ ಉಪಯುಕ್ತವಾಗುತ್ತೇವೆಂದು ಕ್ಷಮಿಸಿದ್ದಾನಂತೆ, ಪಾಪ. ತಪ್ಪು ನಿನ್ನದಲ್ಲ. ನಿನ್ನನ್ನು ಈ ಪಟ್ಟಕ್ಕೆ ಕುಳ್ಳಿರಿಸಿದವನ ತಪ್ಪು.

(ಯಮನು ವಿಶಾಲ ನೇತ್ರನಾಗಿ ಆಶ್ಚರ್ಯದಿಂದೊಡಗೂಡಿದ ಸಂತೋಷ ಭಾವವನ್ನು ಬೀರುವನು.)

**ಚಂಡ:** (ಜನಾಂತಿಕ–aside) ಎಲೋ ವಿಕ್ರಮ! ಒಳ್ಳೆಯ ವ್ಯಕ್ತಿಯನ್ನು ಹುಡುಕಿದಯ್ಯ !

**ವಿಕ್ರಮ:** ಏನೆಂದುಕೊಂಡೆ ನನ್ನ ಆಯ್ಕೆಯೆಂದರೆ ?

**ಯಮ:** ಚಂಡವಿಕ್ರಮರೆ!

**ಚಂಡ,ವಿಕ್ರಮ:** ಜೀಯಾ.

**ಯಮ:** (ಜನಾಂತಿಕ) ಭೇಷ್, ನನ್ನ ಮನಮೆಚ್ಚುವ ಕೆಲಸವನ್ನೇ ಮಾಡಿದ್ದೀರಿ. ಇವನನ್ನು ಕರೆದುಯ್ದು ಚನ್ನಾಗಿ ಕಾಪಾಡಿರಿ. ಊಟ ತಿಂಡಿಗಳಿಗೆ ಸ್ವಲ್ಪವೂ ಕೊರತೆಯಾಗದಂತೆ ನೋಡಿಕೊಳ್ಳಿರಿ. ಯಾವ ವಿಧ ದಲ್ಲಿಯೂ ಇವನಿಗೆ ನಿರಾಶೆ ನಿರುತ್ಸಾಹಗಳಾಗದಂತೆ ಮಾಡುವುದು ನಿಮ್ಮ ಕರ್ತವ್ಯ. ನನ್ನ ಸಂಶೋಧನೆಯನ್ನು ಆದಷ್ಟು ಬೇಗನೆ ಪ್ರಾರಂಭಿಸ ಲಿದ್ದೇನೆ. ಎಲ್ಲವೂ ಗೋಪ್ಯದಲ್ಲಿರಬೇಕು. ತಿಳಿಯಿತೆ?

**ಚಂಡ:** ತಿಳಿಯಿತು ಪ್ರಭು.

**ಯಮ:** ವಿಕ್ರಮಾ! ನೀನು ಸ್ವಲ್ಪ ಜಾಗ್ರತೆಯಿಂದ ಇವನನ್ನು ನೋಡಿಕೊ.

**ವಿಕ್ರಮ:** ಮಹದಾಜ್ಞೆ ಪ್ರಭು.

**ಯಮ:** ನೀವಿನ್ನು ಹೊರಡಿ.

**ಚಂಡ,ವಿಕ್ರಮ:** ಪ್ರಭು ಚಿತ್ತ.

**ವಿಕ್ರಮ:** (ಆಚಾರ್ಯನನ್ನು ಕುರಿತು) ಬಾರಯ್ಯಾ ಬಾ, ಹೀಗೆ ಹೀಗೆ.

(ಮೂವರೂ ತೆರಳುವರು.)

**ಯಮ:** (ಸ್ವಗತ) ದೈವವೆಂದರೆ ನನ್ನದೇ ದೈವ. ನನ್ನ ಕೋರಿಕೆ ಗಳಂತೆ ಎಲ್ಲ ಪ್ರಯತ್ನಗಳೂ ಫಲಿಸುತ್ತಿವೆ. ಅಗತ್ಯವಿದ್ದ ಯೋಗ್ಯ ಮಾನ ವನೂ ದೊರೆತನು. ನನ್ನ ಸಂಶೋಧನೆಯು ಫಲಕಾರಿಯಾಗುವುದರಲ್ಲಿ ಸಂದೇಹವಿಲ್ಲ. ನನ್ನೀಮಹತ್ಕಾರ್ಯವನ್ನು ಶ್ರೀಮನ್ನಾರಾಯಣನೂ ಚತು ರ್ಮುಖನೂ ಮೆಚ್ಚದಿರರು. ಅವರಿಂದ ವರಗಳನ್ನು ಪಡೆದು ಮೂರು ಲೋಕಗಳಿಗೂ ಚಕ್ರವರ್ತಿಯಾಗಿ ಶಿವನಿಗೆ ನನ್ನ ಯೋಗ್ಯತೆಯನ್ನು ತೋರಿಸುತ್ತೇನೆ. ಆ ದಿನ ಮುಂಕನಾರೆಂಬುದನ್ನು ತಾನೇ ತಿಳಿಯಲಿ. ಈ ದಂಡಧರನು ಮನಸ್ಸು ಮಾಡಿದನೆಂದರೆ ಯಾವ ಕಾರ್ಯವಾಗಲಿಕ್ಕಿಲ್ಲ. ಆತ್ಮ ಬಲವೇ ಬಲ.

(ತೆರಳುವನು. ರಾಜಮಾರ್ಗದ ತೆರೆ ಬೀಳುವುದು.)

---

## ದೃಶ್ಯ ೫

[ಯಮಪುರಿಯ ರಾಜಮಾರ್ಗ. ಚಂಡವಿಕ್ರಮರು ಪ್ರವೇಶಿಸುವರು.]

**ವಿಕ್ರಮ:** ಬನ್ನಿ ಸ್ವಾಮಿ ಆಚಾರ್‍ರೆ. ತರುವಾಯ ಊರನ್ನು ನಿಧಾನ ವಾಗಿ ನೋಡಬಹುದು.

**ಚಂಡ:** ಭಲೇ ವಿಕ್ರಮ. ಇನ್ನೇನು ಬಹುಮಾನ ಹೊಡದ್ಬಾಂಗೆ ಕಣೊ. ಅಪ್ಪಾ ಅವರು ನೋಡು, 'ನಾನು ಮೆಚ್ಚಿಕೊಂಡು ಬಿಟ್ಟದೇನೆ' ಅಂತ ಹೇಳ್ಬಿಟ್ರು. ಮೊದಲು ನನಗೆ ಪ್ರಾಣ್ದಾಗೆ ಪ್ರಾಣ ಇರ್ಲಿಲ್ಲ. ಈ ಮನುಷ್ಯ ಹೇಗ್ಹೋಗೊ ಮಾಡಿದ್ರೆ?

**ವಿಕ್ರಮ:** ಹೇಗ್ಹೋಗೊ ಹೇಗೆ ಮಾಡ್ತಾನಯ್ಯ? ನಾನು ಮೊದಲೇ ಹೇಳ್ಲಿಲ್ಲವೆ? ನಮ್ಮ ರಾಯರಿಗೆ ವಿನಾಶ ಕಾಲ ಅಂತ. ಆಸಾಮಿ ಮಾತ್ಕೇಳ್ದಾ ಎಷ್ಟು ಪಸಂದಿತ್ತು. ನಾವು ಯಮದೂತ್ರು ಅಂದ್ಕೂಡ್ಲೆ 'ಸತ್ತೇ'–ಅಂತ ಕೂಗಿದ ಮನುಷ್ಯಾ ಯಮಧರ್ಮನಿಗೆ ಧರ್ಮ ಹೇಳ್ಬಿಟ್ಟ!

**ಚಂಡ:** ಅವಿವೇಕಿ ಅಂತಾನೂ ಅಂದ್ಬಿಟ್ಟ!

**ವಿಕ್ರಮ:** ಯಮಧರ್ಮ ಒಂದಾಡಿದ್ರೆ ಈತ ನಾಲ್ಕು ಮಾತು ಆಡ್ಬಿಟ್ಟ!

**ಚಂಡ:** ಇನ್ಮುಂದಿನ ನಾಟ್ಕ ನೋಡ್ಬೇಕಣ್ಣ ಇನ್ನೂ ತಮಾಷೆ ಯಾಗಿರುತ್ತೆ.

(ಆಚಾರ್ಯ ಪ್ರವೇಶಿಸುವನು.)

**ವಿಕ್ರಮ:** ನಮಸ್ಕಾರ ಸ್ವಾಮಿ. ಒಟ್ಟನ ಮೇಲೆ ನಮ್ಮ ಮರ್ಯಾದೆ ಕಾದ್ರಿ.

**ಆಚಾರ್ಯ:** ಎಲ್ಲಾ ತಮ್ಮ ಪ್ರೋತ್ಸಾಹ.

**ಚಂಡ:** ಒಳ್ಳೇ ಭೇಷ್ ಮಾತ್ನಾಡಿದ್ರಿ ಸ್ವಾಮಿ.

**ಆಚಾರ್ಯ:** ಎಲ್ಲ ದೇವರ ಪ್ರೇರಣೆ. ಈ ದಿನ ಒಂದು ಗಡುವು ದಾಟ್ಸಿದ್ರಿ. ಮುಂದೆ ಕೂಡ........

**ವಿಕ್ರಮ:** ಮುಂದೊಂದೇ ಏಕೆ? ಸದಾ ಎನ್ನಿ. ಈ ನಮ್ಮ ರಾಯರ ಸಂಶೋಧನೆ ಮುಗಿಯೋತನ್ಕ, ನಮ್ಮ ಬಹುಮಾನ ನಮ್ ಕೈ ಸೇರೋ

ತನ್ನ, ತಮ್ಮ ಕೀರ್ತಿ ಮೂರ್ಲೋಕಕ್ಕೂ ಹಬ್ಬೋತನ್ಕ ನಮ್ಮ ಬೆಂಬಲ ತಮ್ಗೆ ಇದ್ದೇ ಇದೆ.

**ಚಂಡ**: ಸ್ವಾಮಿ! ನಾವು ಯಾವಾಗ್಻ ತಮ್ಮಾವ್ರೆ.

**ಆಚಾರ್ಯ**: ಸಂತೋಷನಯ್ಯ.

**ವಿಕ್ರಮ**: ತಮ್ಗೊಂದು ಉತ್ತಮ ಬಿಡಾರ ತೋರಿಸ್ತೇನೆ. ಬೇಕಾದ ಸಲಕರಣೆ ಕೊಡಿಸ್ತೇನೆ. ಒಳ್ಳೊಳ್ಳೆ ಅಡಿಗೆಮಾಡಿ. ಹೊಟ್ಟೆ ತುಂಬಾ ಊಟಮಾಡಿ. ತಮ್ಮ ಪ್ರಸಾದ ನಮ್ಗೂ ಸ್ವಲ್ಪ ತೋರಿಸಿ ಬಿಡಿ.

(ಆಚಾರ್ಯನು ನಗುವನು.)

**ಚಂಡ**: ಸತ್ವಾಗು ಸ್ವಾಮಿ. ನಿಮ್ಮನ್ನ ಬಿಟ್ಟು ಕದ್ಲೋಕಿಲ್ಲ ನಾನಂತು.

**ಆಚಾರ್ಯ**: ಬಹಳ ಸಂತೋಷನಯ್ಯ.

**ವಿಕ್ರಮ**: ಸ್ವಾಮಿ! ಅಲ್ಲಿ ನೋಡಿ. ಆ ಮರದ ತಾವ ಇರೋದೆ ತಮ್ಮ ಮನೆ.

**ಆಚಾರ್ಯ**: ಒಹೊಹೋ ಎಷ್ಟು ದೊಡ್ಡ ಮನೇನಯ್ಯ!

**ವಿಕ್ರಮ**: ಒಳಗೆ ಇನ್ನೂ ಮಜಾ ಇದೆ ಸ್ವಾಮಿ. ಎಲೋ ಚಂಡ, ನೀನು ಕೂಡ್ಲೆ ಹೋಗಿ ಬಾಗಿಲು ತೆಗೆದು ಎಲ್ಲ ಸಜ್ಜು ಮಾಡು. ನಾವೀಗ್ಲೆ ಬರ್ತೇವೆ.

**ಚಂಡ**: ಅಯ್ತಣ್ಣ ಹೋಗ್ತೇನೆ. (ಹೋಗುವನು.)

**ವಿಕ್ರಮ**: ಸ್ವಾಮಿ, ತಾವು ಸ್ವಲ್ಪ ಇಲ್ಲೇ ಇದ್ದರೆ ನಾನು ಕೂಡ್ಲೆ ಮನೆಗೆ ಹೋಗಿ ನಮ್ಮವಳಿಗೆ ಒಂದು ಮಾತು ಹೇಳ್ಬಿಟ್ಟು ಬರ್ತೇನೆ.

**ಆಚಾರ್ಯ**: ಆಗಬಹುದಯ್ಯ ಹೋಗಿ ಬಾ. (ವಿಕ್ರಮ ತೆರಳುವನು.) ಶ್ರೀಹರಿ! ಎಲ್ಲಾ ನಿನ್ನಾಟ. ನಿನ್ಮೇಲೆ ಭಾರ ಹಾಕಿ ಜೀವ ಹಿಡಿದಿದ್ದೆ. ಎಲ್ಲಿ ಅಂಜ್ತೇನೊ, ಎಲ್ಲಿ ಬಾಯ್ ಹೋಗ್ತಾದೊ, ಏನ್ಮಾಡಿಸ್ತಾನೊ ಅಂತಿದ್ದೆ. ಅದಾವ್ದು ಆಗ್ಲಿಲ್ಲ. ಈ ಭಕ್ತನ್ನ ಕಾಪಾಡಿದೆ. ಇಲ್ಲೀ ವರೆಗೆ ನಾನಾಡಿದ್ದನ್ನ ನೆನಸಿಕೊಂಡ್ರೆ ಮೈ ಜುಂ ಅನ್ನುತ್ತೆ. ಇನ್ಮುಂದೆ ಬರೋ ನಾಟಕಕ್ಕೆ ನೀನೇ ಇದ್ದೀಯ ಜಗನ್ನಾಟಕ ಸೂತ್ರಧಾರಿ. (ಸ್ವಲ್ಪ ಯೋಚಿಸಿ) ಅಲ್ಲಾ! ಯಮ ಲೋಕ ಅಂದ್ರೇನು! ಊಟ ತಿಂಡಿ ಉಪಚಾರ ಅಂದ್ರೇನು! ನನ್ಗೊಂದು ಅರ್ಥ

ವಾಗಲೊಲ್ಲದು. ಈ ಇಬ್ಬರು ಮಕ್ಕಳು ಪ್ರೋತ್ಸಾಹ ಕೊಡ್ತ ಇದ್ದಾರೆ. ನಾನಂತೂ ಮುಂದಿಟ್ಟ ಹೆಜ್ಜೆ ಹಿಂದಕ್ಕೆ ತೆಗೆಯೋದಿಲ್ಲ. (ಸ್ವಲ್ಪ ಯೋಚಿಸಿ) ಅಲ್ಲಾ, ಈ ಮಗಂಗೆ ಎಲ್ಲರ ಟಪಾಲು ಬರುತ್ತೆ. ನಾನೂ ಒಂದು ಕಾಗದ ಕೂಡಲೆ ಬರೆದು ಕಳಿಸಿ ಒಂದು ತಮಾಷೆ ಮಾಡ್ತೇನೆ. ಹೇಗೂ ಈ ಇಬ್ಬರು ಶಿಷ್ಯಂದಿರು, ನಮ್ಮ ಚಂಡವಿಕ್ರಮರು, 'ಸ್ವಾಮಿ! ನಾವು ಯಾವಾಗ್ಲು ತಮ್ಮಾಮ್ರೆ' ಅಂತ ಹೇಳ್ತಾರೆ. ನನ್ನ ಕಾಗದ ನೋಡಿ ಇವನಪ್ಪ ಕೂಡ ನಡುಗಬೇಕು. ಇವನು ಸಂಶೋಧನೆ ಸುರುವು ಮಾಡೋ ಮೊದಲೇ ಇವನ್ನ ಊರ್ಬಿಡಿಸಿ ಕೈಲಾಸ ಕಾಣಿಸ್ತೇನೆ. ಸ್ವಾಮಿ! ಎಲ್ಲಾ ನಿನ್ನ ಪ್ರೇರಣೆ.

**ವಿಕ್ರಮ:** (ಪುನಃ ಪ್ರವೇಶಿಸಿ) ಸ್ವಾಮಿ ಆಚಾರ್ರೆ, ಬನ್ನಿ ಹೋಗೋಣ. ಹೀಗೆ ಹೀಗೆ.

(ತೆರಳುವರು.)

---

## ದೃಶ್ಯ ೬

[ಯಮಧರ್ಮನಾಸ್ಥಾನ. ಯಮಧರ್ಮ ಚಿತ್ರಗುಪ್ತರು ಚರ್ಚಿಸುತ್ತಿರುವರು.]

**ಯಮ:** ಚಿತ್ರಗುಪ್ತರೆ! ತಾವು ಹೇಳುವುದೆಲ್ಲವು ಸರಿಯೆ. ಆದರೆ ನಾವೆಷ್ಟಾದರು ಆಜ್ಞಾನುಕಾರಿಗಳೆನ್ನುವುದನ್ನು ಮರೆಯಲಾಗದು. ಪರಹಿತ ಚಿಂತನೆಯಿಲ್ಲದೆ ಶಂಕರನು ಯಾವ ಕೆಲಸವನ್ನೂ ಮಾಡುವುದಿಲ್ಲವೆಂದು ನನ್ನ ನಂಬಿಕೆ. ಹುಟ್ಟಿದಂದಿನಿಂದಲೂ ನೀಚಕೃತ್ಯಗಳಲ್ಲಿಯೇ ಮುಳುಗಿದ್ದ ಮನುಷ್ಯನಿಗೆ ಮರಣಕಾಲದಲ್ಲಿ ಮಾತ್ರ ಪರಮಾತ್ಮನ ನಾಮಸ್ಮರಣೆ ಮಾಡಲು ಮನಬರುತ್ತದೆನ್ನುವುದನ್ನು ನಾನು ನಂಬಲಾರೆ.

**ಚಿತ್ರಗುಪ್ತ:** ಮನಬರಲೀ ಬಾರದಿರಲೀ ಆಯಾ ವ್ಯಕ್ತಿಗಳ ಪಾಪ ಪುಣ್ಯಗಳಿಗನುಗುಣವಾಗಿ ಫಲ ಕೊಟ್ಟರಾಯಿತಲ್ಲವೆ? ಸತ್ಕುಲ ಸಂಭೂತ

ನಾಗಿ ಸದಾಚಾರ ಸಂಪನ್ನನಾಗಿ ಪ್ರಾಣತ್ಯಾಗ ಮಾಡಿದವನಿಗೂ ಅನಂತಾನಂತ ನೀಚ ಕೃತ್ಯಗಳನ್ನು ತನ್ನ ಪರಮಧರ್ಮವೆಂದು ಭಾವಿಸಿ, ಆಚರಣೆಯಲ್ಲಿಟ್ಟುಕೊಂಡು ಕೊನೆಗೊಮ್ಮೆ 'ಶಿವಾ' ಎಂದು ಪ್ರಾಣತ್ಯಾಗ ಮಾಡಿದವನಿಗೂ ತಾರತಮ್ಯವಿಲ್ಲವೆ? ಉಚ್ಚನೀಚರೆಂಬ ಪರಿಜ್ಞಾನವು ಬೇಡವೆ?

**ಯಮ:** ಚಿತ್ರಗುಪ್ತರೆ! ಎಷ್ಟು ಸಲ ಹೇಳಿದರೂ ಅದೇ ಮಾತು. ಶಿಕ್ಷೆಯನ್ನು ಕೊಡುವಲ್ಲಿ ಉಪಯುಕ್ತವಾಗಬಲ್ಲ ಯಂತ್ರಗಳೇ ಹೊರತು ನಾವು ಯಾರಿಗೆ ಯಾವ ಶಿಕ್ಷೆಯೆಂದು ವಿಧಿಸುವವರಲ್ಲ.

**ಚಿತ್ರಗುಪ್ತ:** ನಾವು ಕೇವಲ ಸೂತ್ರದ ಬೊಂಬೆಗಳೆಂದು ನಾನು ಮಾತ್ರ ತಿಳಿಯಲಾರೆ. ಕ್ಷಮಿಸಬೇಕು, ನಾನೇ ತಮ್ಮ ಸ್ಥಾನದಲ್ಲಿದ್ದುದಾದರೆ...

(ಓರ್ವ ಸೇವಕನು ಒಂದು ಪತ್ರವನ್ನು ತೆಗೆದುಕೊಂಡು ಪ್ರವೇಶಿಸುವನು.)

**ಸೇವಕ:** ಮಹರಾಜರಿಗೆ ವಿಜಯವಾಗಲಿ. ಪತ್ರವ್ಯವಹಾರ ಶಾಖೆಯ ಸೇವಕನೊಬ್ಬನು ಈ ಪತ್ರವನ್ನು ತಂದೊಪ್ಪಿಸಿ ಹೋದ ಜೀಯ. (ವಂದಿಸಿ ಪತ್ರವನ್ನು ಕೊಡುವನು.)

**ಯಮ:** (ಪತ್ರವನ್ನೊಮ್ಮೆ ಮನಸ್ಸಿನಲ್ಲಿಯೇ ಓದಿ) ಏನಿದು ಬಹಳ ವಿಚಿತ್ರವಾಗಿದೆ! ಶಂಕರನೆಂದೂ ಇಷ್ಟು ಕಠೋರವಾಗಿ ಪತ್ರವನ್ನು ಬರೆದಿರಲಿಲ್ಲ. ಮಂತ್ರಿವರ್ಯರೇ! ಶಂಕರನ ಇಂದಿನ ಪತ್ರವನ್ನು ನೋಡಿ. ತರುವಾಯ, ನಾವು ಇಂಥಾ ಸಂದರ್ಭಗಳಲ್ಲಿ ಸ್ವಾತಂತ್ರ್ಯಕ್ಕಾಗಿ ಹೆಣಗಾಡಿದರೆ ಏನಾದೀತೆಂಬುದನ್ನು ಯೋಚಿಸಿ–ಕೇಳಿ– (ಓದುವನು).

'ಭೂಲೋಕದ ಪ್ರಜೆಗಳು ಅನ್ನ ನೀರುಗಳ ಅಭಾವದಿಂದ ಬಳಲಿ, ಬೇಸತ್ತು ಆ ಹಸಿವು ತೃಷೆಗಳನ್ನು ಸಹಿಸಲಾರದೆ ಒಬ್ಬರನ್ನೊಬ್ಬರು ಮುರಿದು ತಿನ್ನಲು ಪ್ರಾರಂಭಿಸಿ, ಸತ್ಯಧರ್ಮಗಳನ್ನು ಮರೆತು, ದುರ್ಮಾರ್ಗವನ್ನು ಹಿಡಿದಿರುತ್ತಾರೆ. ಇಂತಹ ಪರಿಸ್ಥಿತಿಗೆ ಮೂಲಕಾರಣರು ಆಡಳತೆಯನ್ನು ವಹಿಸಿರುವ ಎಲ್ಲಾ ಶಾಖೆಗಳ ಕಾರ್ಯವಿಮುಖರಾದ ಅಧಿಕಾರಿಗಳು. ಲೋಕ ಕಲ್ಯಾಣಕ್ಕೆ ಅತ್ಯಗತ್ಯವಾದ ವಿಶೇಷ ಸಲಹೆ ಸೂಚನೆಗಳನ್ನು ಕೊಡಲು ಶಂಕರನು ಬಯಸಿ ಅಷ್ಟದಿಕ್ಪಾಲಾದಿ ಅಧಿಕಾರಿಗಳನ್ನು ಕೂಡಲೆ ಸಭೆ ಸೇರಲು ಈ ಮೂಲಕ ಆಜ್ಞಾಪಿಸುತ್ತಾನೆ?'

ನೋಡಿದಿರಾ ಹೇಗಿದೆ. ಇಂಥಾ ಸಂದರ್ಭಗಳಲ್ಲಿ ಆತನಪ್ಪಣೆಯನ್ನು ವಿಾರಿ ನಡೆದಲ್ಲಿ ಪರಿಣಾಮವೇನಾಗಬಹುದು ಯೋಚಿಸಿ. ಆದ್ದರಿಂದಲೇ ನಾನು ಸದಾ ಬಹುಜಾಗರೂಕನಾಗಿರುತ್ತೇನೆ. ಆಡಳತೆಯನ್ನು ವಹಿಸಿದ ಮೇಲೆ ಮುಂಜಾಗ್ರತೆಬೇಕು. ಇರಲಿ. ಈಗ ನಾನು ತಡ ಮಾಡುವಂತಿಲ್ಲ. ಇಲ್ಲಿಯ ಕಾರ್ಯಗಳನ್ನು ಬಂದನಂತರ ಮಾಡಿಕೊಂಡರಾದೀತು. ಕೂಡಲೇ ಹೊರಡುತ್ತೇನೆ.

**ಚಿತ್ರಗುಪ್ತ:** ಪ್ರಭುಚಿತ್ತ. (ಯಮನು ಗಡಿಬಿಡಿಯಿಂದ ಹೋದ ನಂತರ) ಎಲ್ಲವೂ ಕಾಲಮಹಿಮೆ. ಭೂಲೋಕದಲ್ಲಾಗುವ ಹಾವಳಿಗೆ ಯಾರು ಕಾರಣರು? ಅಷ್ಟದಿಕ್ಪಾಲಕರಿಂದಾಗಬೇಕಾದುದೇನಿದೆ ಈಗ? ಯಾರ ತಪ್ಪಿಗೆ ಯಾರು ಕಾರಣರು? ನಮ್ಮಲ್ಲಿ ಎಂದಿಗಿಂತಲೂ ಉತ್ತಮ ರೀತಿಯಲ್ಲಿ ಕಾರ್ಯವು ಜರುಗುತ್ತಲಿದೆ. ಎಲ್ಲಾ ವಿಚಿತ್ರವಾಗಿದೆ. ಈ ನಮ್ಮ ದೊರೆಯ ವರ್ತನೆಯೋ, ಎಷ್ಟು ಹೇಳಿದರೂ ತೀರದು. ತನ್ನಂತೆಯೇ ಇತರರೂ ಅನ್ಯ ವಿಷಯಗಳಲ್ಲಿ ತಲ್ಲೀನರಾಗಿರುತ್ತಾರೆಂದು ತಿಳಿಯುತ್ತಾನೆ. ಮೇಲಧಿಕಾರಿಗಳ ಮಾತಿಗೆ ತಲೆ ಹಾಕಿದರೆ ಕಾರ್ಯದಕ್ಷನಾದೆನೆಂದು ತಿಳಿಯುತ್ತಾನೆ. ನಡೆಗೂ ನುಡಿಗೂ ಅಜಗಜಾಂತರ. ಶಿವನಾಜ್ಞೆಯನ್ನು ಅಕ್ಷರಶಃ ಪಾಲಿಸುವಂಥವನಾಗಿದ್ದರೆ ಯಾವ ಅಧಿಕಾರದಿಂದ ಈ ಒಬ್ಬ ನೂತನ ವ್ಯಕ್ತಿಯನ್ನು ಕರೆತಂದುದು? ಏತಕ್ಕಾಗಿ ಕರೆತಂದುದು? ಎಷ್ಟು ಗೋಪ್ಯ! ಭಲೆ; ಇಂಥ ವರದೇ ಕಾಲವಿದು. (ತೆರೆಯ ಕಡೆ ನೋಡಿ) ಅದೋ! ಆ ಹೊಸ ವ್ಯಕ್ತಿ ಇತ್ತ ಕಡೆಯೆ ಬರುತ್ತಲಿದ್ದಾನೆ. ಬರಲಿ. ಕುಳಿತಿದ್ದು ವಿಚಾರಿಸುತ್ತೇನೆ. ಎಲ್ಲ ವಿಷಯವೂ ತಿಳಿಯುಬಹುದು. (ಲೆಕ್ಕಗಳನ್ನು ನೋಡುತ್ತ ಕುಳಿತು ಕೊಳ್ಳುವನು.)

**ಆಚಾರ್ಯ:** (ಹರಿನಾಮಸ್ಮರಣೆ ಮಾಡುತ್ತ ಪ್ರವೇಶಿಸಿ– ಸ್ವಗತ) ಸರಿ. ಅರ್ಥವಾಯಿತು. ಆಸ್ಥಾನ ಖಾಲಿ ಇದೆ. ನಮ್ಮ ಕಾಗದ ಕೆಲಸ ಮಾಡಿದೆ. ಕೈವಾಡವೆಂದರೆ ನನ್ನದೇ **ಕೈವಾಡ.** ಈ ಅಪ್ಪ ಕೈಯಿಟ್ಟು ಎರಡಕ್ಷರ ಗೀಚಿದ ಅಂದರೆ ಇವರಪ್ಪ ಕೂಡ ನಡುಗಬೇಕು. ಇರಲಿ, ಇವನ್ನ ಸ್ವಲ್ಪ ವಿಚಾರಿಸಿದ್ರೆ ಎಲ್ಲಾ ಸ್ಪಷ್ಟವಾಗುತ್ತದೆ. (ಮಂತ್ರಿಯನ್ನು ಕುರಿತು) ಮಹಾಶಯರೆ!

ತಾವು ಸಚಿವೋತ್ತಮರೆಂದು ತಿಳಿಯುತ್ತೇನೆ.

**ಚಿತ್ರಗುಪ್ತ**: ಅಹುದಹುದು. ತಾವು?

**ಆಚಾರ್ಯ**: ನಾವೋರ್ವ ಭೂಸುರರು.

**ಚಿತ್ರಗುಪ್ತ**: ತಾವಿಲ್ಲಿಗೆ ಹೊಸತಾಗಿ ಬಂದಂತಿದೆ?

**ಆಚಾರ್ಯ**: ನಾವಾಗಿ ಬಂದುದಲ್ಲ. ಯಾವುದೋ ಸಂಶೋಧನೆಯಲ್ಲಿ ನೆರವಾಗಬೇಕೆಂದು ತಮ್ಮ ಮಹಾರಾಜರೇ ಬರಮಾಡಿಕೊಂಡಿದ್ದಾರೆ.

**ಚಿತ್ರಗುಪ್ತ**: ಸರಿ ಸರಿ.

**ಆಚಾರ್ಯ**: ಸದ್ಯಾ ಅವರು ಎಲ್ಲಿದ್ದಾರೋ ಕಾಣೆ.

**ಚಿತ್ರಗುಪ್ತ**: ಅವರು ತಮಗೆ ಈ ದಿನ ಕಾಣೋಹಾಗಿಲ್ಲ.

**ಆಚಾರ್ಯ**: ಏಕೆ? ಎಲ್ಲಿಗೆ ಹೋಗಿದ್ದಾರೆ?

**ಚಿತ್ರಗುಪ್ತ**: ಅದೆಲ್ಲ ತಾವು ಕೇಳಬಾರದು. ತಮಗೆ ತಿಳಿಯದ ಸ್ಥಾನಕ್ಕೆ ಹೋಗಿದ್ದಾರೆ.

**ಆಚಾರ್ಯ**: ನಮಗೆ ತಿಳಿಯದ ಸ್ಥಾನಕ್ಕೆ! (ಸ್ವಲ್ಪ ಯೋಚಿಸಿದಂತೆ ನಟಿಸಿ) ಕೈಲಾಸಕ್ಕೆ ಹೋಗಿದ್ದಾರಾ?

**ಚಿತ್ರಗುಪ್ತ**: (ಬೆಚ್ಚಿಬಿದ್ದು – ಸ್ವಗತ) ಮೂರ್ತಿ ತ್ರಿಕಾಲಜ್ಞಾನಿಯೆಂದು ಕಾಣುತ್ತೆ. (ಪ್ರಕಾಶ) ಅದು ಹೇಗೆ ಸ್ವಾಮಿ ತಮಗೆ ತಿಳಿಯಿತು?

**ಆಚಾರ್ಯ**: ಅಯ್ಯೋ ಇದೊಂದು ದೊಡ್ಡ ವಿಷಯಾನೆ? ತಮ್ಮಿಂದ ತಿಳಿಯುವ ಅಂತ ಕೇಳಿದ್ದು ಅಷ್ಟೆ. ಇವೆಲ್ಲವೂ ನಮ್ಮ ದಿವ್ಯಜ್ಞಾನಕ್ಕೆ ಒಳಪಟ್ಟಂಥವುಗಳು.

**ಚಿತ್ರಗುಪ್ತ**: ತಮ್ಮ ಮುಖ ನೋಡಿದ ಕೂಡಲೆ ದೊಡ್ಡವರಂತ ಭಾವಿಸಿದೆ. ಒಂದೇ ಒಂದು ಮಾತಿನಲ್ಲಿ ಮನದಟ್ಟಾಯಿತು ನೋಡಿ. ಅವರು ಮಾಡೋ ಕೆಲಸವನ್ನೆಲ್ಲ ಗೋಪ್ಯವಾಗಿಟ್ಟಿರುತ್ತಾರೆ.

**ಆಚಾರ್ಯ**: ಇವರ ಗೋಪ್ಯ ನಮ್ಮಂಥವರಲ್ಲಿಯೆ?

**ಚಿತ್ರಗುಪ್ತ**: ನಮ್ಮಲ್ಲಿ ಅವರಿಗೆ ಅಪನಂಬಿಕೆ. ತಮ್ಮನ್ನು ಬರಮಾಡಿಕೊಂಡದ್ದನ್ನು ನಮಗೆ ತಿಳಿಸಿಯೇ ಇಲ್ಲ.

**ಆಚಾರ್ಯ**: ಅದು ಅವರ ಸ್ವಭಾವ. ಆದರೆ ದೊಡ್ಡ ಸ್ಥಾನದಲ್ಲಿ

ಇರೋ ಜನರಿಗೆ ಈ ರೀತಿ ಮನಸ್ಸು ಒಳ್ಳೇದಲ್ಲ. ಈಗ ನೋಡಿ, ಎಷ್ಟೋ ಕೆಲಸಗಳನ್ನು ಬದಿಗಿಟ್ಟು ನಾವಿಲ್ಲಿಗೆ ಬಂದಾಗ ಹೇಳ್ದೆ ಕೇಳ್ದೆ ಹೋದರೆ ನಾವೇನ್ಮಾಡ್ಬೇಕು?

**ಚಿತ್ರಗುಪ್ತ:** ನಾನೂ ಅದನ್ನೇ ಅನ್ನೋದು. ನಿಷ್ಗೊಂದು ಮಾತು ಹೇಳಿಬಿಟ್ಟು ಹೋಗಿದ್ರೆ?

**ಆಚಾರ್ಯ:** ತೊಂದ್ರೆನೇ ಇರ್ತಿರಲಿಲ್ಲ. ಅಷ್ಟು ಬುದ್ಧಿ ಇವರಿಗೆಲ್ಲಿದೆ? ಎಲ್ಲಾ ನಮ್ಮ ತಪ್ಪು. ಬರಬಾರದಾಗಿತ್ತು, ಬಂದಿದ್ದೇವೆ. ಆದದ್ದೆಲ್ಲ ಆಗಲಿ. ಕಾದು ಕೂಡ್ತೇವೆ. (ಮುಂದಕ್ಕೆ ಬಂದು) ಮೇಷ, ವೃಷಭ, ಮಿಥುನ-- ಒಂದೂ, ಎರಡೂ, ಮೂರು, ಮೂರು ಮೂರಲೆ ಒಂಭತ್ತು, ಎರಡುಹೋದರೆ ಏಳು; ಏಳು ಬೀಳು. ಥೇ ಪ್ರಯೋಜನವಿಲ್ಲ. ಅಲ್ಲಿಂದ ಅಶ್ವಿನೀ, ಭರಣೀ, ಕೃತ್ತಿಕಾ, ರೋಹಿಣಿ, ಮೃಗಶಿರ, ಆರಿದ್ರಾ... ಆರಿದ್ರಾದಿಂದ ದಾರಿದ್ರ್ಯ. ಇದೂ ಅಷ್ಟೇ. ಪಾಪ, ಕಷ್ಟಕಾಲ. ದೇವರೇ ಕಾಪಾಡಬೇಕು. ಆತ ಬಂದ ನಂತರ ಕೇಳೋಣ. (ಮಂತ್ರಿಯನ್ನು ಕುರಿತು) ತಮಗೆ ತೊಂದರೆ ಮಾಡಿದೆವು. ಕ್ಷಮಿಸಿ. ನಾವು ಬರ್ತೇವೆ. (ಕೈ ಮುಗಿಯುವನು.)

**ಚಿತ್ರಗುಪ್ತ:** ಸಂತೋಷ. ಹೊರಡಬಹುದು. (ಚಿತ್ರಗುಪ್ತ ಆಲೋಚಿಸುತ್ತ ಕುಳಿತುಕೊಳ್ಳುವನು.)

**ಆಚಾರ್ಯ:** (ಮುಂದೆ ಬಂದು) ಸಿಕ್ಕ, ಈ ಮಗನೂ ಸಿಕ್ಕ. ನನ್ನಬಲೆಯಲ್ಲಿ ಬಿದ್ದ. ಒಂದೇ ಏಟಿಗೆ ಉರುಳಿದ್ದಾನೆ. ಎರಡನೇ ಪತ್ರ ಬರೆದು ಈ ಅಪ್ಪನ ಹೆಸರಿಲೆ ಈಗಲೇ ಕಳ್ಸಿ ಬಿಡ್ತೇನೆ. ನಮ್ಮ ಸ್ವಾಮಿ ಮನಸ್ಸು ಮಾಡಿದಾ ಅಂದರೆ ಇವರನ್ನೆಲ್ಲಾ ಕುಣಿಸಿ ಬಿಡ್ತೇನೆ. (ತೆರಳುವನು.)

**ಚಿತ್ರಗುಪ್ತ:** [ಮುಂದೆ ಬಂದು] ಅಲ್ಲಾ ಎಂಥಾ ಸೂಕ್ಷ್ಮ ಬುದ್ಧಿ! ನಾನೆಷ್ಟು ಮುಚ್ಚಿಟ್ಟರು 'ಕೈಲಾಸಕ್ಕೆ ಹೋಗಿದ್ದಾರೆ' ಅಂತ ಹೇಳ್ಬಿಟ್ರು. ಯಮಧರ್ಮನ ಬುದ್ಧಿಯನ್ನಾಗಲೆ ಕಂಡು ಕೊಂಡಿದಾರೆ. ಅದಿರಲಿ, ಕೊನೇಗೊಂದು ಮಾತು ಹೇಳಿದರಲ್ಲ, 'ದಾರಿದ್ರ್ಯ, ಕಷ್ಟಕಾಲ' ಅಂತ ಅದು ಯಾರನ್ನು ಕುರಿತಾಗಿರಬಹುದು? ಯಮಧರ್ಮನ್ನ ಕುರಿತಾಗಿರಬಹುದೆ? (ಸ್ವಲ್ಪ ಯೋಚಿಸಿ) ಆಚಾರ್ಯನನ್ನೇ ಕೇಳಿದ್ದರಾಗುತ್ತಲಿತ್ತು.

ನೋಡ್ಹೋಣ, ಕೂಡಲೆ ಇಂದಿನ ಲೆಕ್ಕಪತ್ರಗಳನ್ನು ಮುಗಿಸಿ ಆಚಾರ್ಯನನ್ನು ಕಾಣಲು ಹೊರಡುತ್ತೇನೆ.

(ಪುನಃ ಲೆಕ್ಕಗಳನ್ನು ನೋಡುತ್ತ ಕುಳಿತುಕೊಳ್ಳುವನು.)

(ಅರಣ್ಯದ ತೆರೆ ಬೀಳುವುದು.)

---

# ದೃಶ್ಯ ೭

[ಅರಣ್ಯ- ಸ್ನಾನ ಘಟ್ಟಕ್ಕೆ ಹೋಗುವ ಮಾರ್ಗ. ಅಚಾರ್ಯನೂ ಚಂಡನೂ ಪ್ರವೇಶಿಸುವರು.]

**ಆಚಾರ್ಯ:** ಚಂಡಾ! ಸ್ವಲ್ಪ ಹೀಗೆ ಬಾ. ಇಗೋ ಈ ಪತ್ರವನ್ನು ತೆಗೆದುಕೊ. ಟಪಾಲಿಗೆ ಕೂಡಲೆ ನೀನೇ ಹಾಕಿ ಬಾ. ಯಾರಿಗೂ ಇದನ್ನು ತೋರಿಸಬಾರದು.

**ಚಂಡ:** ಇಲ್ಲ ದೇವುರು.

**ವಿಕ್ರಮ:** (ವಿರುದ್ಧ ದಿಕ್ಕಿನಿಂದ ಪ್ರವೇಶಿಸಿ ದೂರದಲ್ಲಿ ನಿಂತುಕೊಂಡು) ಅಪ್ಪಾ ಅವರು ಏನೋ ಮಾತ್ನಾಡ್ತಾರೆ– ಗುಟ್ಟಿನಲ್ಲಿ! ಅವರ ಈ ಮಾತು ಮುಗೀಲಿ.

**ಆಚಾರ್ಯ:** ಇವೆಲ್ಲ ಆಫೀಸಿನ ಕಾಗದ. ಬಹಳ ಜಾಗ್ರತೆಯಿಂದ ಕೆಲಸ ಮಾಡ್ಬೇಕು. ಯಾರಾದರೂ ನೋಡಿದರೆ....

**ಚಂಡ:** ಹಾಂಗೆಲ್ಲ ಮಾಡೋದಿಲ್ಲ ದೇವುರು. ಆವಾಗ ಕೊಟ್ಟ ಕಾಗದ ನೋಡಿ–ಗಪ್‌ಚುಪ್ ತಗೊಂಡು ಹೋಗಿ ತಾವು ಹೇಳಿದ್ಹಾಂಗೆ ಕಳಿಸಿ ಬಂದೀನಿ. ಇಂಥಾ ಕೆಲಸ ಮಾಡೋದ್ರಾಗೆ ನಾನು ಬಹಳ ಹುಷಾರಿ.

**ಆಚಾರ್ಯ:** ಹೌದು. ನೀನು ಅನುಭವಶಾಲಿ ಅಂತ ನಿನ್ನನ್ನೇ ಈ ಕೆಲ್ಸಕ್ಕೆ ಹಚ್ಚ್ಹೋದು. ಕೊಡ್ಲೆ ಹೋಗಿ ಮನೆ ಹತ್ತಿರ ಬಾ. ಅಷ್ಟರಲ್ಲಿ ಸ್ನಾನ ಮುಗಿಸಿಕೊಂಡು ಬರ್ತೀನೆ.

**ಚಂಡ:** ಹೊರಟೆ ಬುದ್ಧಿ. (ತೆರಳುವನು.)

**ಆಚಾರ್ಯ:** (ವಿಕ್ರಮನನ್ನು ನೋಡಿ, ಚಕಿತನಾಗಿ) ಅಲ್ಲ ವಿಕ್ರಮ!

**ವಿಕ್ರಮ:** ಬಂದೆ ನನ್ನೊಡೆಯ.

**ಆಚಾರ್ಯ:** ಬಹಳ ಹೊತ್ತಾಯ್ತೆ ಕಾಯ್ತಾ ನಿಂತು?

**ವಿಕ್ರಮ:** ಇಲ್ಲ ದೇವ್ರು. ಚಂಡಗೆ ಏನೋ ಕೆಲ್ಸ ಹೇಳ್ತಾ ಇದ್ದಿರಿ. ನಾನೇಕೆ ಅಡ್ಡ ಬರೋದು ಅಂತ ಹಿಂದಕ್ಕೆ ಸರಿದೆ.

**ಆಚಾರ್ಯ:** ಭೇಷ್ ಭೇಷ್.

**ವಿಕ್ರಮ:** ಅಪ್ಪಾ! ಚಂಡಗೆ ಚನ್ನಾಗಿ ಕೆಲಸ ಕೊಡ್ರಿ. ಹೆಚ್ಚು ದುಡೀಲವನು. ಇಲ್ಲೀ ವರೆಗೆ ಕೆಲ್ಸಾನೆ ಇಲ್ದೆ ತಿಂದು ತಿಂದು ನೋಡ್ರಿ, ಹ್ಯಾಂಗಿದ್ದಾನೆ. ಸ್ವಲ್ಪ ಮೈಯಾದರು ಕರಗಲಿ.

**ಆಚಾರ್ಯ:** ಒಳ್ಳೆಯವನಯ್ಯ ನೀನು ವಿಕ್ರಮ. ಇಲ್ಲೀ ವರೆಗೆ ಅವನು ಮೇದಿದಾನೆ. ಇನ್ನು ಮೇಲೆ ನೀನು ಮೇಯಿ.

**ವಿಕ್ರಮ:** ತಮ್ಮ ಹತ್ತಿರ ಇರೋ ವರೆಗೆ ನನ್ಗೆ ತೊಂದ್ರೆನೇ ಇಲ್ಲ. ತಮ್ಮ ಅನುಗ್ರಹವಾದರೆ ನನಗೇನು ಕೊರತೆ?

**ಆಚಾರ್ಯ:** ಆಗಲಿ ವಿಕ್ರಮ. ಈ ದಿನ, ಇಲ್ಲಿ ನೋಡು, ಒಂದು ಹೊಸ ಅಡಿಗೆ ಮಾಡ್ತೇನೆ.

**ವಿಕ್ರಮ:** ಅಗತ್ಯವಾಗಿ ಮಾಡಿ ದೇವರು. ಬೇಕಾದ ಸಾಮಗ್ರಿ ತರಲಿಕ್ಕೆ ನಾನಿದ್ದೇನೆ. ಉಗ್ರಾಣವೂ ಭರ್ತಿ ಇದೆ.

**ಆಚಾರ್ಯ:** ಈ ದಿನ ಹೊಸತಾಗಿ ತರೋದೆಂದ್ರೆ— ಸಜ್ಜಿಗೆ, ಸಕ್ಕರೆ, ಯಾಲಕ್ಕಿ, ಗೋಡಂಬಿ, ದ್ರಾಕ್ಷಿ, ಕೇಸರಿ, ಹಾಲು, ತುಪ್ಪ, ಬಾಳೆಹಣ್ಣು.. ತಿಳೀತೆ?

**ವಿಕ್ರಮ:** ತಿಳೀತು ಸ್ವಾಮಿ. ಸಜ್ಜಿಗೆ, ಸಕ್ಕರೆ, ಗೋಡಂಬಿ, ದ್ರಾಕ್ಷಿ, ಹಾಲು, ತುಪ್ಪ.... ....ಅಲ್ಲಿಂದ....ಬಾಳೆಹಣ್ಣು.

**ಆಚಾರ್ಯ:** ಆಗೋ ಯಾಲಕ್ಕಿ ಮರತೆ.

**ವಿಕ್ರಮ:** ಹೌದು ದೇವರು. ಮರ್‍ತಿದ್ದೆ.

**ಆಚಾರ್ಯ:** ಮತ್ತೇ........ಕೇಸರಿ?

P. B. Krishna Raju

**ವಿಕ್ರಮ:** ಅಯ್ಯೋ ಅದನ್ನೂ ಮರ್ತಿದ್ದೆ. ಯಾಲಕ್ಕಿ, ಕೇಸರಿ, ಯಾಲಕ್ಕಿ, ಕೇಸರಿ....ಸರಿ; ಇನ್ನು ಮರೆಯೋಕಿಲ್ಲ. ಇದರ ಮೇಲೆ ಉಳಿದ ಸಾಮಾನು ನಿನ್ನಿನಂತೆ.

**ಆಚಾರ್ಯ:** ಆಷ್ಟೆ. ಬೇರೊಂದು ಮಾತು. ನೀನು ಊಟದ ಹೊತ್ತಿಗೆ ಎಲ್ಲಿಗೂ ಹೋಗಬಾರದು. ಹೊರಗೇ ಕಾದಿರು. ಬಿಸಿಬಿಸೀದೆ ಉಣ್ಬಹುದು.

**ವಿಕ್ರಮ:** ಒಳ್ಳೇದು ದೇವರು. ಈಗ ಜಲ್ದೀ ಹೋಗಿ ಸಾಮಾನು ತರ್ತೀನೆ.

**ಆಚಾರ್ಯ:** ಸರಿ. ನಾನೂ ಸ್ನಾನ ಘಟ್ಟಕ್ಕೆ ಹೋಗಿ ಸ್ನಾನ ಮಾಡಿ ಬಂದು ಜಪಕ್ಕೆ ಕೂಡ್ತೇನೆ.

**ವಿಕ್ರಮ:** ಒಳ್ಳೇದು ಬುದ್ಧಿ. (ಸಾಮಾನುಗಳ ಹೆಸರನ್ನು ಹೇಳುತ್ತ ತೆರಳುವನು.)

**ಆಚಾರ್ಯ:** (ಮುಂದಕ್ಕೆ ಬಂದು) ಒಳ್ಳೆಯ ನೌಕರರು ಸಿಕ್ಕಿದ್ದಾರೆ! ಚಂಡನಂತೂ ನನ್ನ ಕೈಗೊಂಬೆ. ಏನೂ ಕಪಟವನ್ನರಿಯದವ. ಇವನೊಬ್ಬ ಶಿಷ್ಯ ಮತ್ತು ಇಷ್ಟು ಸುವ್ಯವಸ್ಥಿತವಾದ ಪತ್ರವ್ಯವಹಾರ ಶಾಖೆ- ಇವೆರಡೂ ಇಲ್ಲದಿದ್ದರೆ ನನ್ನ ಹಂಚಿಕೆಗಳೆಲ್ಲವೂ ಮಣ್ಣು ಪಾಲಾಗುತ್ತಲಿದ್ದುವು. ಈಗ ಚಂಡನೊಡನೆ ಕಳಿಸಿದ ಪತ್ರ ನನ್ನ ಎರಡನೇ ಅಸ್ತ್ರ. ಅದು ನಮ್ಮ ಮಂತ್ರಿವರ್ಯ ಚಿತ್ರಗುಪ್ತರಿಗೆ. ಯಮಧರ್ಮನು ಬರೆದಂತೆ ಬರೆದಿದ್ದೇನೆ. ಅದರ ಪ್ರಭಾವ ಕೂಡಲೇ ಕಾಣಲಿದೆ. ದೇವಾ! ಇದೆಲ್ಲ ನಿನ್ನ ಪ್ರೇರಣೆ.

(ತೆರಳುವನು. ರಾಜಮಾರ್ಗದ ತೆರೆ ಬೀಳುವುದು.)

---

## ದೃಶ್ಯ ೮

[ರಾಜಮಾರ್ಗ. ಚಿತ್ರಗುಪ್ತನು ಪ್ರವೇಶಿಸುವನು.]

**ಚಿತ್ರಗುಪ್ತ:** ಒಮ್ಮೆ ಲೆಕ್ಕಗಳನ್ನು ಮುಗಿಸಿದಂತಾಯಿತು. ಇನ್ನು ಆಚಾರ್ಯನನ್ನು ಕಂಡು ಸವಿಮಾತುಗಳನ್ನಾಡಿ ಯಮಧರ್ಮನ ಎಲ್ಲ ವಿಚಾರ

ಗಳನ್ನು ಆಮೂಲಾಗ್ರವಾಗಿ ತಿಳಿಯಲು ಹೊರಟೆ. (ಮುನ್ನಡೆಯುವನು. ವಿರುದ್ಧ ದಿಕ್ಕಿನಿಂದ ಸೇನಾಪತಿಯು ಪ್ರವೇಶಿಸುವನು.)

**ಸೇನಾಪತಿ:** ಸಚಿವೋತ್ತಮರಿಗೆ ಅನಂತಾನಂತ ವಂದನೆಗಳು.

**ಚಿತ್ರಗುಪ್ತ:** ಏನು ಸೇನಾಪತಿಗಳೇ, ಎತ್ತ ಕಡೆ ದಯಮಾಡಿಸಿದಿರಿ?

**ಸೇನಾಪತಿ:** ಪ್ರಭುಗಳನ್ನು ಕಂಡು ನಾಲ್ಕು ಮಾತುಗಳನ್ನು ವಿಜ್ಞಾಪಿಸಿಕೊಂಡು ಹೋಗೋಣವೆಂದು ಹೊರಟೆ.

**ಚಿತ್ರಗುಪ್ತ:** ಅವರು ಎಲ್ಲಿಗೋ ಪ್ರಯಾಣ ಬೆಳಸಿದ್ದಾರೆ. ವಿಶೇಷವೇನಿಲ್ಲವಷ್ಟೆ?

**ಸೇನಾಪತಿ:** ವಿಶೇಷವೆಂದರೇನು? ಎಲ್ಲಾ ತಾವು ಅರಿತಿರುವ ವಿಷಯವೆ. ಪ್ರಭುಗಳು ನಮ್ಮ ಶಾಖೆಗೆ ಬಾರದೆ ಹಲವಾರು ದಿನಗಳಾದುವು. ಸೇನೆಗೆ ಸಂಬಂಧಪಟ್ಟ ಕೆಲವೊಂದು ಮಾರ್ಪಾಟುಗಳು ಅತಿ ತೀವ್ರವಾಗಿ ಆಗಬೇಕಾಗಿವೆ. ಪ್ರಭುಗಳಲ್ಲಿ ನಾಲ್ಕು ಬಾರಿಯಾದರೂ ವಿಜ್ಞಾಪಿಸಿಕೊಂಡಿರುತ್ತೇನೆ.

**ಚಿತ್ರಗುಪ್ತ:** ಇದೆಲ್ಲಾ ಹಳೆಯ ಮಾತೇ. ಅವರು ಹಿಂತಿರುಗಿ ಬಂದ ನಂತರ ವಿಚಾರ ಮಾಡುವ.

(ಓರ್ವ ಸೇವಕನು ಒಂದು ಪತ್ರದೊಡನೆ ಓಡುತ್ತ ಪ್ರವೇಶಿಸುವನು.)

**ಸೇವಕ:** ಒಡೆಯರ ಪಾದಕ್ಕೆ ವಂದನೆ. ತಮಗಾಗಿ ಈ ಪತ್ರವನ್ನು ಓರ್ವ ಸೇವಕನು ತಂದೊಪ್ಪಿಸಿ ಹೋದ ಜೀಯ. (ಪತ್ರವನ್ನು ಕೊಟ್ಟು ತೆರಳುವನು.)

**ಸೇನಾಪತಿ:** ಅಪ್ಪಣೆಯಾದರೆ ನಾನು ಹೊರಡುತ್ತೇನೆ.

**ಚಿತ್ರಗುಪ್ತ:** ಆಗಬಹುದು. [ಸೇನಾಪತಿಯು ತೆರಳುವನು. ಚಿತ್ರಗುಪ್ತನು ಒಮ್ಮೆ ಪತ್ರವನ್ನು ನೋಡಿ] ಆಶ್ಚರ್ಯ! ಯಮಧರ್ಮನ ಅಕ್ಷರದಂತಿದೆ. [ಓದುವನು.]

“ಮಂತ್ರಿವರ್ಯ ಚಿತ್ರಗುಪ್ತರಿಗೆ ಅಭಿಮಾನಪೂರ್ವಕವಾಗಿ–ಶಂಕರನಾಜ್ಞಾನುಸಾರವಾಗಿ ನಾವು ಪರಿಷತ್ತಿನಲ್ಲಿ ಭಾಗವಹಿಸಲು ಹೊರಟೆವಷ್ಟೆ? ಹೊರಡುವ ಗಲಭೆಯಲ್ಲಿ ಆಲೋಚಿಸಲು ಸಹಾ ಆಗಲಿಲ್ಲ. ಈಗ ಫಕ್ಕನೆ

ಹೊಳೆದುದರಿಂದ ಈ ಎರಡು ಮಾತುಗಳನ್ನು ಮಾತ್ರ ಈ ಚಾರನ ದ್ವಾರಾ ತಿಳಿಸಿರುತ್ತೇನೆ. ನಾವು ಮರಳಿ ಬರಲು ಸ್ವಲ್ಪ ಸಮಯವಾಗಲೂ ಬಹುದು. ವಿಶೇಷ ರಾಜಕಾರ್ಯಗಳನ್ನು ನಿರ್ವಹಿಸಲು ಒಬ್ಬರು ಬೇಕಲ್ಲವೆ? ತಮಗೆ ಯಾರಿಂದಲೂ ಯಾವ ರೀತಿಯಲ್ಲಿಯೂ ಮಾತು ಬರಕೂಡದೆಂದು ದೀರ್ಘಾಲೋಚನೆಮಾಡಿ ನಮ್ಮಲ್ಲಿಗೆ ನಾವು ಈಗ ತಾನೇ ಬರಮಾಡಿಕೊಂಡಿರುವ ಶ್ರೀಮದಾಚಾರ್ಯರನ್ನು ತಾತ್ಕಾಲಿಕವಾಗಿ ಪ್ರತಿನಿಧಿಗಳಾಗಿರಬೇಕೆಂದು ಈ ಮೂಲಕ ವಿಜ್ಞಾಪಿಸಿಕೊಂಡಿದ್ದೇನೆ. ಅವರನ್ನು ನೀವೇ ಸಂದರ್ಶಿಸಿ, ಮಾತನಾಡಿ, ಅಧಿಕಾರವನ್ನು ಸ್ವೀಕರಿಸುವಂತೆಮಾಡಿ. ಹೀಗೆಂದು-ತಮ್ಮ ಶ್ರೇಯೋಭಿಲಾಷಿ **—ಯುಮಧರ್ಮ."**

(ಸ್ವಲ್ಪ ಜಿಗುಪ್ಸೆಯನ್ನು ಸೂಚಿಸಿ) ಹೂಂ. ಮೋಸದ ಬಲೆ; ಅವಿವೇಕದ ಪರಮಾವಧಿ; ಅವಿಶ್ವಾಸ ಅಪನಂಬಿಕೆಗಳು ಶಿಖರವನ್ನು ಮುಟ್ಟಿದುವು. ಹುಚ್ಚು ಹೊಳೆಯಂತೆ ಹರಿಯುತ್ತಿದೆ ಇವನ ಬುದ್ಧಿ; ವಿನಾಶಕಾಲವೊದಗದಿದ್ದರೆ ಹೀಗೆ ಮಾಡುವನೆ? ಮನೆ ಬಿಡುವ ಮೊದಲೇ ಹೇಳಲು ಸಹಾ ಅಂಜಿಕೆ. ಹೇಡಿ. ನನ್ನಲ್ಲಿಯೂ ಶಂಕೆಯನ್ನಿಟ್ಟುಕೊಂಡಿದ್ದಾನೆ. ಹಾಗಲ್ಲದಿದ್ದರೆ ಆಗಂತುಕನ ವಶಕ್ಕೆ ಇಂಥಾ ರಾಜ್ಯವನ್ನು ಬಿಟ್ಟು ಕೊಡುವನೆ? ಪರದೇಶಿಯಾದವನಿಗೆ ಇಲ್ಲಿಯ ಆಡಳಿತೆಯೇನು ಗೊತ್ತು? ಯಾವ ಅಧಿಕಾರದ ಬಲದಿಂದ ರಾಜ್ಯವನ್ನು ಆಗಂತುಕನ ವಶಕ್ಕೆ ಒಪ್ಪಿಸಿದುದು? ಇದೆಲ್ಲಕ್ಕೂ ಈಶ್ವರನೊಪ್ಪಿಗೆಯುಂಟೆ? ಉದ್ಧಟತನ. (ಸ್ವಲ್ಪ ಯೋಚಿಸಿ) ಇಲ್ಲವೆ ಇದೇ ಇವನ ಸಂಶೋಧನೆಯ ತಳಹದಿಯಾಗಿರಬಹುದೆ? ಹಾಳಾಗಲಿ. ಯೋಚಿಸಿ ಫಲವಿಲ್ಲ. ಆ ಆಚಾರ್ಯನೊಪ್ಪಿದರೆ ಸರಿ, ಇಲ್ಲವಾದರೆ ಯಾವ ನಾಯಿಯಾದರೂ ರಾಜ್ಯಭಾರವನ್ನು ವಹಿಸಲಿ. ಒಟ್ಟಿನಲ್ಲಿ ಇಂಥಾ ಹೀನರನ್ನು ಸೇವಿಸಿ ಹೊಟ್ಟೆಹೊರೆಯುವುದು ನಮ್ಮ ಕರ್ಮ. ಒಂದು ದಿನಕ್ಕಾದರೂ ಯಮಪಟ್ಟವನ್ನೇರಿ ಮೆರೆಯುವುದು ಆ ಆಚಾರ್ಯನ ಪುಣ್ಯ. ಎಲ್ಲಾ ಕಾಲಮಹಿಮೆ.

(ತೆರಳುವನು.)

---

## ದೃಶ್ಯ ೯

[ಆಚಾರ್ಯನು ವಾಸವಾಗಿರುವ ಒಂದು ಕೋಣೆ. ಆತನು ಹರಿನಾಮ ಸ್ಮರಣೆಮಾಡುತ್ತ ಕುಳಿತಿರುವನು.]

**ಆಚಾರ್ಯ:** (ಹಾಡನ್ನು ನಿಲ್ಲಿಸಿ) ಶ್ರೀಹರೀ, ಪರಮಾತ್ಮಾ, ನಿನ್ನನ್ನು ಧ್ಯಾನಿಸುತ್ತ ಎಲ್ಲಾ ತುಂಟಾಟಗಳನ್ನು ಮಾಡುತ್ತಲಿರುವೆ. ನನ್ನಾಟಗಳೆಲ್ಲವೂ ನಿನಗೆ ಮೆಚ್ಚಿಗೆಯಾಗಿರಬೇಕಲ್ಲವೆ? ಸದಾ ಈ ಭಕ್ತನಿಗೆ ನಿನ್ನ ನಾಮ ಸ್ಮರಣೆ ಮಾಡುವ ಮನಸ್ಸು ಕೊಡು. (ನಮಸ್ಕರಿಸಿ ಮುಂದಕ್ಕೆ ಬಂದು) ಅಲ್ಲಾ ಎಂಥಾ ಜನ ಈ ಲೋಕದವರು! ರಾಜನಿಗಿಂತ ಮಂತ್ರಿ ಜಾಣ, ಮಂತ್ರಿಗಿಂತಲೂ ಪ್ರಜರು ಜಾಣರು! [ನಕ್ಕು-ತೆರೆಯ ಕಡೆ ನೋಡಿ] ಅದೋ ಆ ಪ್ರಭೃತಿ, ಮಂತ್ರಿ, ಹೀಗೇ ಬರುತ್ತಲಿದ್ದಾನೆ. ಕೈಯಲ್ಲಿ ನನ್ನ ಕಾಗದವೂ ಇದೆ! ಪಾಪ ಬರಲಿ, ಬರಲಿ; ನಾನೊಂದು ಹೊಸ ವೇಷ ಹಾಕಿ ಕೂಡುತ್ತೇನೆ. [ಕೂಡಲೆ ಪದ್ಮಾಸನ ಹಾಕಿ ಕೂತುಕೊಳ್ಳುವನು.]

**ಚಿತ್ರಗುಪ್ತ:** [ಪ್ರವೇಶಿಸಿ] ಆಹಾ ಎಂಥಾ ತೇಜಸ್ಸಿದು! ಎಂಥಾ ಯೋಗಾಭ್ಯಾಸ! ಮಹಾನುಭಾವರಲ್ಲವೆ ಈ ಜನ. ತಪ್ಪಲ್ಲ, ನಮ್ಮ ಯಮ ಧರ್ಮನ ಆಯ್ಕೆ ತಪ್ಪಲ್ಲ. ಒಮ್ಮೆ ಇವರು ಈ ರಾಜ್ಯಭಾರವನ್ನು ವಹಿಸುವುದಾದರೆ ನನ್ನ ಬುದ್ಧಿಚಾತುರ್ಯಗಳಿಂದ ಆದಷ್ಟು ಮಾರ್ಪಾಟುಗಳನ್ನು ಮಾಡಿಸಿ ಬಿಡುತ್ತೇನೆ. ಯಮಧರ್ಮನು ಬಂದು ನೋಡಿ ನಾಚಿಗೊಳ್ಳಬೇಕು. [ಅಷ್ಟರಲ್ಲಿ ಆಚಾರ್ಯನು ಕಣ್ಬಿಟ್ಟು ನೋಡುವನು.] ಮಹಾತ್ಮರಿಗೆ ದೀರ್ಘದಂಡ ನಮಸ್ಕಾರ.

**ಆಚಾರ್ಯ:** ನಾರಾಯಣ, ನಾರಾಯಣ. ಬನ್ನಿ. ಇಷ್ಟಕಾರ್ಯಸಿದ್ಧಿರಸ್ತು. ಸಚಿವೋತ್ತಮರು ಬಹಳ ದೂರ ಬಂದಂತಾಯಿತು. ತುಂಬಾ ಸಂತೋಷ. ಕೂತುಕೊಳ್ಳಿ. ವಿಶೇಷವೇನಿಲ್ಲವಷ್ಟೆ?

**ಚಿತ್ರಗುಪ್ತ:** ತಮ್ಮನ್ನೇ ಕಂಡು ಹೋಗಲು ಬಂದೆ. ಬಂದದ್ದೂ ಸಾರ್ಥಕವಾಯಿತು.

**ಆಚಾರ್ಯ:** ಅದೇನಂಥಾ ಸಾರ್ಥಕ್ಯ?

**ಚಿತ್ರಗುಪ್ತ:** ಸಮಾಧಿಸ್ಥಿತರಾದ ತಮ್ಮ ದರ್ಶನ.

**ಆಚಾರ್ಯ:** ಅಯ್ಯೋ ಅಯ್ಯೋ, ಎಂಥಾ ದೊಡ್ಡ ಮಾತನ್ನಾಡಿದಿರಿ. ಇರಲಿ. ಅದು ಸಜ್ಜನ ಸ್ವಭಾವ. ಏನಾದರೂ ಹೊಸ ವಿಚಾರವುಂಟೆ?

**ಚಿತ್ರಗುಪ್ತ:** ನಮ್ಮ ಪ್ರಭುಗಳು ತಮಗೆ ತಿಳಿದಿರುವಂತೆ ಕೈಲಾಸವನ್ನು ಕುರಿತು ಪ್ರಯಾಣ ಬೆಳಸಿದರಲ್ಲ? ಸ್ವಲ್ಪ ದೂರ ಹೋದನಂತರ --

**ಆಚಾರ್ಯ:** (ಕುತೂಹಲದಿಂದ) ಏನಾಯ್ತು?

**ಚಿತ್ರಗುಪ್ತ:** ನನಗೆ ಈ ಒಂದು ಪತ್ರವನ್ನು ಬರೆದು ಕಳಿಸಿದ್ದಾರೆ.

**ಆಚಾರ್ಯ:** ಅಷ್ಟೇನಾ? ನಾರಾಯಣ, ನಾರಾಯಣಃ ಏನೆಂದು ಆಜ್ಞಾಪಿಸಿದ್ದಾರೆ?

**ಚಿತ್ರಗುಪ್ತ:** ಅವರು ಬರುವ ವರೆಗೂ ರಾಜಕಾರ್ಯಭಾರಗಳನ್ನು ವಹಿಸಿರಲು ತಮ್ಮಲ್ಲಿ ಕೇಳಿಕೊಳ್ಳಬೇಕೆಂದು.

**ಆಚಾರ್ಯ:** ನಮ್ಮಲ್ಲಿ!

**ಚಿತ್ರಗುಪ್ತ:** ಅಹುದಹುದು. ಇಲ್ಲಿ ನೋಡಿ ಪತ್ರವನ್ನೇ ತಂದಿರುತ್ತೇನೆ. (ಪತ್ರವನ್ನು ಕೊಡುವನು.)

**ಆಚಾರ್ಯ:** (ಪತ್ರವನ್ನು ನೋಡಿ) ಪರಮಾತ್ಮಾ! ಇದೇನು ಪರಿಹಾಸ್ಯವೋ ಅಥವಾ ನಮ್ಮ ಪರೀಕ್ಷೆಯೊ?

**ಚಿತ್ರಗುಪ್ತ:** ಇಲ್ಲವೆ ಅವರ ಸಂಶೋಧನೆಯ ತಳಹದಿಯೊ!

**ಆಚಾರ್ಯ:** ಸರಿ, ಸರಿ. ಹಾಗಿದ್ದರೂ ಇರಬಹುದು. ಸಚಿವೋತ್ತಮರೆ! ಇದರ ಮರ್ಮ ನಾನೆಷ್ಟು ಯೋಚಿಸಿದರೂ ಗೊತ್ತಾಗಲೊಲ್ಲದು. ಯಾವುದು ಯಾವುದಕ್ಕೆ ತಾಳೆ? ಇದು ಲೌಕಿಕ, ನಮ್ಮದು ಪಾರಮಾರ್ಥಿಕ.

**ಚಿತ್ರಗುಪ್ತ::** ನಿಜ, ಅಕ್ಷರಶಃ ನಿಜ.

**ಆಚಾರ್ಯ:** ನಮ್ಮಂಥವರಿಗೆ ರಾಜ್ಯವೇಕೆ? ಕಾರಭಾರವೇಕೆ?

**ಚಿತ್ರಗುಪ್ತ:** ಅದು ತಮಗೇ ಅರಿಕೆ. ಅದನ್ನು ನಾನು---

**ಆಚಾರ್ಯ:** ಆಡಬಾರದೇನು? ನಮಗೆಲ್ಲಾ ತಿಳಿದ ಮಾತೇ. ರಾಜಕಾರ್ಯಧುರೀಣರಾದ ತಮ್ಮನ್ನು ಈ ರೀತಿಯಲ್ಲಿ ಬದಿಗಿಟ್ಟದ್ದು ಸ್ವಲ್ಪ ಸಂಶಯಾಸ್ಪದವಾದ ಮಾತೇ ಅಲ್ಲವೆ?

**ಚಿತ್ರಗುಪ್ತ:** ಆ ಮಾತನ್ನು ನಾನು ಅನ್ಕೊಡ್ದು.

**ಆಚಾರ್ಯ:** ಎಲ್ಲಿಯಾದರೂ ಉಂಟೆ, ಪಾಪ. ಯಾವ ಯೋಗ್ಯತೆ, ಏನ್ಕಥೆ! ಒಟ್ಟಿನಲ್ಲಿ ಹೇಳುವುದಾದರೆ ಕಾಲವೇ ಕೆಟ್ಟದ್ದು. ಅಲ್ಪರ ಸಂಗ ಅಭಿಮಾನ ಭಂಗ.

**ಚಿತ್ರಗುಪ್ತ:** ಪೂಜ್ಯರ ವಾಣಿ.

**ಆಚಾರ್ಯ:** ಇದಲ್ದೆ ನಮ್ಗೇನು ರಾಜನೀತಿ ಗೊತ್ತೇ? ಆಡಳ್ತೆ ಗೊತ್ತೇ? ನಿಮ್ಮ ವಿಧಿನೇಮಗಳು ಗೊತ್ತೇ?

**ಚಿತ್ರಗುಪ್ತ:** ಕ್ಷಮಿಸಬೇಕು. ನಾನು ಮಾತ್ರ ಈ ಮಾತನ್ನು ಒಪ್ಕೋಕಿಲ್ಲ. ತಾವು ತ್ರಿಕಾಲ ಜ್ಞಾನಿಗಳು. ನಾನಾಗ್ಲೆ ಕಂಡ್ಕೊಂಡು ಬಿಟ್ಟಿದೇನೆ.

**ಆಚಾರ್ಯ:** ಎಂಥಾ ದೊಡ್ಡ ಮನುಷ್ಯರಯ್ಯ ಚಿತ್ರಗುಪ್ತರೆ ನೀವು. ತುಂಬಾ ಹುಷಾರಿ ಇದ್ದೀರಾ. ಬಹಳ ಸಂತೋಷವಾಯ್ತು. ಆದರೆ 'ಅರಿಯೆ ಎನ್ನೋದು ಅರಸು ಗುಣ' ಅಲ್ವೆ? ಎಲ್ಲಾ ಗೊತ್ತು ಅಂದರೆ ಎಲ್ಲಾ ಮಾಡಿ ಅಂತಾರೆ ಈಗಿನ ಕಾಲದ ಜನ.

**ಚಿತ್ರಗುಪ್ತ:** ಅದು ಸತ್ಯ. ಆದರೆ ನಾನೇನ್ಮಾಡ್ಲಿಕ್ಕಿದೆ. ಅವರು ಹೇಳ್ದಂತೆ ಕುಣಿಯೋದು ಮಾತ್ರ ನನ್ಕೆಲಸ ಈಗಾಗಲೆ ನಿಷ್ಣಾತರಾಗಿ ದೇನೆ. ಮುಂದೆ ಅದನ್ನೇ ಬೆಳೆಸಬಾರ್ದು ಅಂತ ನನ್ನಾಶೆ.

**ಆಚಾರ್ಯ:** ಎಂದಿಗೂ ಬೆಳಸಕೂಡ್ದು. ಅದು ದೊಡ್ಡವರ ಲಕ್ಷಣ.

**ಚಿತ್ರಗುಪ್ತ:** ಆದ್ದರಿಂದ ದಯವಿಟ್ಟು ನನಗೆ ಮಾತು ಬಾರ್ದಂತೆ ಮಾಡ್ಬಿಡಿ ಸದ್ಯಾ.

**ಆಚಾರ್ಯ:** ಹೌದ್ಹೌದು. ನಾಲ್ಕು ಕಾಲ ಬಾಳೋರು ನೀವು ಇಂದಿದ್ದು ನಾಳೆ ಹೋಗೋರು ನಾವು. ನಮ್ಮಿಂದ ಆದಷ್ಟು ಉಪಕಾರ ಮಾಡ್ತೇವೆ. ಆದರೆ ತಮ್ಮ ಬೆಂಬಲ ಮಾತ್ರ ಬೇಕು.

**ಚಿತ್ರಗುಪ್ತ:** ತಾವು ನಾಮಕಾರ್ಥವಾಗಿ ಅಧಿಕಾರ ವಹಿಸಿ. ಉಳಿದ ಕೆಲ್ಸವನ್ನೆಲ್ಲ ನಿಮ್ಮ ಹೆಸರಿನ ಮೇಲೆ ನಾನು ಮಾಡಿಸ್ತೇನೆ. ಆಗಬಹುದೆ?

**ಆಚಾರ್ಯ:** ಸರಿ, ಸರಿ. ತುಂಬಾ ಸಂತೋಷವಾಯ್ತು. ಅಲ್ಲ,

ಈಗ ಇನ್ನೊಂದು ಮಾತು. ಇದರಿಂದ ನಮ್ಮ ದೇವತಾರ್ಚನೆಗೆ ತೊಂದರೆ ಬರುತ್ತೆಯೊ ಏನೋ ಅಂತ ನನಗೆ ಭಯ.

**ಚಿತ್ರಗುಪ್ತ:** ತಿಳಿದವರಿಗೆ ನಾನು ಹೇಳಬಾರದು. ಕ್ಷಮಿಸಿಬಿಡಿ. ಆ ಪರಮಾತ್ಮನೇ ಮೆಚ್ಚೋ ಹಾಗೆ ರಾಜ್ಯಭಾರ ಮಾಡಿದರೆ ಅದೂ ಆತನಿಗೆ ಸಲ್ಲಿಸುವ ಸೇವೆ ಆಗದೆ?

**ಆಚಾರ್ಯ:** ಮುತ್ತಿನಂಥ ಮಾತ್ನಾಡಿದಿರಿ. ಮಾತಿನ ಜೋಡಣ ನೋಡಿ ಹೇಗಿದೆ!–'ಪರಮಾತ್ಮ ಮೆಚ್ಚೋ ಹಾಗೆ!' ಭೇಷ್ ಭೇಷ್. ದೇವತಾ ಮನುಷ್ಯರಯ್ಯ ನೀವು, ಚಿತ್ರಗುಪ್ತರೆ. ನಿಮ್ಮ ಬೆಂಬಲ ಇರೋ ವರೆಗೆ ನನಗೇನೂ ತೊಂದ್ರೆ ಇಲ್ಲ. ಅದು ಸರಿಯೆನ್ನಿ. ಅಧಿಕಾರ ವಹಿಸಿದ ಮೇಲೆ ಸ್ವಲ್ಪ ದರ್ಪ ತೋರಿಸಬೇಕು. ಕುಂದುಕೊರತೆ ಹೋಗ್ಲಾಡಿಸಬೇಕು. ಆಡಳತೆ ಅಂದರೆ ಎಲ್ಲಾ ಉಂಟು ನೋಡಿ.

**ಚಿತ್ರಗುಪ್ತ:** ಇಲ್ಲಾವ್ದ್ರೆ ಏನು ಪ್ರಯೋಜನ.

**ಆಚಾರ್ಯ:** ಈ ಎರಡು ದಿನಗಳಲ್ಲಿ ಇಲ್ಲೀ ಅವ್ಯವಸ್ಥೆ ನೋಡಿ ನಮಗೆ ಬೇಜಾರು ಬಂದಿದೆ. ಏನನ್ಯಾಯ, ಏನು ಹೊಲಸು, ಎಲ್ಲಿ ನೋಡಿವ್ರು ಅತೃಪ್ತಿ, ಎಲ್ಲರಲ್ಲಿಯೂ ಅವಿಶ್ವಾಸ. ಹೀಗಿದ್ದರೆ ಆಡಳ್ತೆ ಏನಾದೀತು ನೋಡಿ. ಇದು ಕೇವಲ ನಮ್ಮೊಳಗಿನ ಮಾತು, ಗುಟ್ಟಾಗಿರಲಿ.

**ಚಿತ್ರಗುಪ್ತ:** ಎನ್ನಾಣೆಯಾಗಿಯೂ ರಟ್ಮಾಡ್ಲಿಕ್ಕಿಲ್ಲ.

**ಆಚಾರ್ಯ:** ಇದೆಲ್ಲಕ್ಕೂ ಕಾರಣರು ನಿಮ್ಮ ದೊರೆಗಳೇ ಅಲ್ವೇ?

**ಚಿತ್ರಗುಪ್ತ:** ಅದು ತಮಗೇ ಅರಿಕೆ.

**ಆಚಾರ್ಯ:** ಇದೆಲ್ಲವನ್ನೂ ನಾವು ತಿದ್ದಲು ಬರುತ್ತದೆಯೆ? ತಿದ್ದಿದಷೆ ನಿಮ್ಮ ರಾಯರಿಗೆ ಮೆಚ್ಚಿಗೆಯೆ? ಅದು ಸುತರಾಂ ಇರ್ಲಿಕ್ಕಿಲ್ಲ. (ಸ್ವಲ್ಪ ಯೋಚಿಸಿದಂತೆ ನಟಿಸಿ) ನನಗೆ ಇನ್ನೊಂದು ಭೀತಿ. ಏನಂದರೆ ಹೀಗೆಲ್ಲಾ ಮಾಡ್ಬೇಕೆಂದು ನಮ್ಮ ಸ್ವಾಮಿ ಆ ಶ್ರೀಮನ್ನಾರಾಯಣ ಇವರಿಗೆ ಹೇಳಿದ್ದರೆ? ಅದೂ ನಮ್ಮನ್ನ ಪರೀಕ್ಷೆ ಮಾಡ್ಲಿಕ್ಕೆ ಆಗಿದ್ದರೆ?

**ಚಿತ್ರಗುಪ್ತ:** ಅಯ್ಯೋ ಹಾಗಿದ್ದರೂ ಇರಬಹುದು. ನೀವು ತುಂಬಾ ಜಾಗ್ರತೆಯಿಂದ ಇರ್ಬೇಕಾಯ್ತು.

**ಆಚಾರ್ಯ:** ಅದನ್ನೇ ನಾನೂ ಹೇಳೋದಕ್ಕೆ ಹೊರಟೆ. ನಮ್ಗೇಕೆ ಅಂತ ಸುಮ್ಮನೆ ಕೂತರೆ ಪರಮಾತ್ಮ 'ಇವನಪ್ರಯೋಜಕ' ಎಂದ್ಬಿಟ್ರೆ.

**ಚಿತ್ರಗುಪ್ತ:** ಎಂಥಾ ಅನ್ಯಾಯವಾಗುತ್ತೆ ನೋಡಿ!

**ಆಚಾರ್ಯ:** ಆದ್ದರಿಂದಲೇ ಆಚೇನೂ ಅಲ್ಲ, ಈಚೇನೂ ಅಲ್ಲ ಅನ್ನೋ ರೀತಿಯಲ್ಲಿ ಕೆಲಸ ಮಾಡ್ಬೇಕು ನಾವೀಗ.

**ಚಿತ್ರಗುಪ್ತ:** ಸತ್ಯ ಸತ್ಯ.

**ಆಚಾರ್ಯ:** ಕೆಲ್ಸಕ್ಕೆ ಕೈ ಹಾಕ್ಬಾರ್ದು, ಹಾಕಿದ್ಮೇಲೆ ಚನ್ನಾಗಿ ಮಾಡ್ಬೇಕು.

**ಚಿತ್ರಗುಪ್ತ:** ಸತ್ಯ ಸತ್ಯ.

**ಆಚಾರ್ಯ:** 'ಪರೋಪಕಾರಾರ್ಥಮಿದಂ ಶರೀರಂ' ತಿಳೀತೆ? ಮಾಡೋ ಕೆಲ್ಸ ಮಾಡಿ ಬಿಡೋಣ.

**ಚಿತ್ರಗುಪ್ತ:** ತುಂಬಾ ಸಂತೋಷ. ಇದೇ ಶುಭದಿನ ನಮಗೆ. ತಮ್ಮ ಶ್ರಮ ಹತ್ರೂ ಜನರೇಳ್ಗೆ.

**ಆಚಾರ್ಯ:** ನಾಲ್ಕು ಜನರಿಗೆ ಉಪಕಾರವಾಗದಿದ್ರೆ ಈ ಶರೀರವಾದ್ರು ಏಕೆ? ಹೊರೋ ಭೂದೇವಿಗೆ ಭಾರವಾಗಲಿಕ್ಕಾ?

**ಚಿತ್ರಗುಪ್ತ:** ಎಂಥಾ ಮಾತು ಎಂಥಾ ಮಾತು! ತಮ್ಮ ಒಪ್ಪಿಗೆಯನ್ನು ಸೂಚಿಸಲು ತಮ್ಮ ಸಹಿಯುನ್ನು ದಯವಿಟ್ಟು ಇದೇ ಪತ್ರದ ಮೇಲೆ ಮಾಡಿದರೆ—

**ಆಚಾರ್ಯ:** ಆಗಬಹುದು. (ಸಹಿಯನ್ನಿಕ್ಕುವನು.)

**ಚಿತ್ರಗುಪ್ತ:** ಶ್ರೀಮದಾಚಾರ್ಯರು ನಮಗಿಂದು ತಾತ್ಕಾಲಿಕವಾಗಿ ಶ್ರೀಮನ್ಮಹಾರಾಜರಾದರು. ತಮ್ಮ ಅನುಗ್ರಹ ನಮ್ಮ ಭಾಗ್ಯ.

**ಆಚಾರ್ಯ:** (ನಕ್ಕು) ತಮ್ಮ ಪ್ರೀತಿಯ ಮುಂದೆ ನಮ್ಮ ಅನುಗ್ರಹವೆ? ತಮ್ಮ ಪ್ರೀತಿ, ಸೌಜನ್ಯ ಎಲ್ಲದರಿಂದಲೂ ನಮ್ಮನ್ನು ಬಂಧಿಸಿ ಬಿಟ್ಟಿದೀರಿ.

**ಚಿತ್ರಗುಪ್ತ:** ಇನ್ನು ನಾನು ಕೂಡಲೆ ಹೋಗಿ ಪ್ರಜೆಗಳಿಗೆ ಈ ಶುಭ ವಾರ್ತೆಯನ್ನು ತಿಳಿಸುತ್ತೇನೆ.

**ಆಚಾರ್ಯ:** ಆಗಬಹುದು. ಆದರೆ ಒಂದು ಮಾತು ಮಾತ್ರ ಜ್ಞಾಪಕ ವಿರಲಿ. ಪ್ರಜೆಗಳಲ್ಲಿ ನಮ್ಮ ವಿಚಾರವಾಗಿ ವಿಶೇಷ ಪ್ರಶಂಸೆ ಮಾಡೋದು ಬೇಡ.

**ಚಿತ್ರಗುಪ್ತ**: ಎಂಥಾ ದೊಡ್ಡ ಮನಸ್ಸು ತಮ್ಮದು!

**ಆಚಾರ್ಯ**: ತಾವಿನ್ನು ಹೊರಡಬಹುದು.

**ಚಿತ್ರಗುಪ್ತ**: ಧನ್ಯರಾದೆವು. (ಕೈ ಮುಗಿದು ತೆರಳುವನು.)

**ಆಚಾರ್ಯ**: [ಸ್ವಗತ] ದೇವಾ! ಎಂಥಾ ನಾಟಕವನ್ನಾಡಿಸುತ್ತಿರುವಿ! ಎಂಥೆಂಥಾ ಸೂತ್ರದ ಬೊಂಬೆಗಳನ್ನು ತಯಾರಿಸಿರುವೆ! ಸಾಗಲಿ, ಜಗನ್ನಾಟಕದಲ್ಲಿ ನಾನೊಬ್ಬ ಪಾತ್ರಧಾರಿ. ದಿಗ್ದರ್ಶಕನಾದ ನೀನು ಸೂಚಿಸಿದಂತೆ ನಟಿಸಿದರಾಯಿತು ನನ್ನ ಕೆಲಸ. (ಹಾಡುತ್ತ ತೆರಳುವನು.)

[ಅಂಕ ಪರದೆ ಬೀಳುವುದು.]

---

# ಎರಡನೆಯ ಅಂಕ

## ದೃಶ್ಯ ೧

[ಕೈಲಾಸ. ಪ್ರಾತಃಕಾಲದ ಸಮಯ. ಶಂಕರನು ಪದ್ಮಾಸನ ಹಾಕಿ ತಪಸ್ಸು ಮಾಡುತ್ತಲಿರುವನು. ಯಮಧರ್ಮನು ಹಾಡುತ್ತ ಪ್ರವೇಶಿಸುವನು.]

**ಯಮ**: (ದೃಶ್ಯವನ್ನು ನೋಡಿ ಆಶ್ಚರ್ಯಗೊಂಡು) ಎಂಥಾ ಸನ್ನಿವೇಶವಿದು! ಏನು ಮನೋಹರವಾದ ದೃಶ್ಯವಿದು! ಎಷ್ಟು ಉಲ್ಲಾಸವನ್ನುಂಟು ಮಾಡುತ್ತಿದೆ ಮನಸ್ಸಿಗೆ! ಶಂಕರನಾಲಯವನ್ನು ಸಮೀಪಿಸಿದಂತೆ ನನ್ನ ಧೈರ್ಯವೇ ಕುಂದುತ್ತಿದೆ. ದೂರದಲ್ಲಿರುವಾಗ ನನ್ನಲ್ಲಿದ್ದ ಆ ಧೈರ್ಯಸ್ಥೈರ್ಯಗಳು ಈಗೆಲ್ಲಿಯೋ ಮಾಯವಾದುವು. (ಮುಂದಕ್ಕೆ ಬಂದು ಶಂಕರನನ್ನು

ನೋಡಿ) ಆಹಾ, ಎಂಥಾ ಸ್ವರೂಪವಿದು! ಏನು ತೇಜಸ್ಸು, ಏನು ಲಕ್ಷಣ! ಯಾರನ್ನು ಕುರಿತು ಈ ತಪಸ್ಸು? ಯಾವ ಕಾರ್ಯ ಸಿದ್ಧಿಗೋಸ್ಕರ ಈ ಯೋಗಮುದ್ರೆ? ಸಕಲ ಲೋಕ ಕರ್ತೃವಾದವನಿಗೆ ಗುರುವಿರುವನೆ? ಇಲ್ಲ, ಎಂದಿಗೂ ಇಲ್ಲ. ಇದು ಕೇವಲ ಅವನ ಲೀಲೆ. ದೇವಾ! ಶಂಭೋ, ನಿನ್ನ ಲೀಲೆಯು ಅಗಾಧವಾದುದು. ಅದನ್ನರಿಯಲು ನಾವು ಸಮರ್ಥರಲ್ಲ. (ಅಷ್ಟರಲ್ಲಿ ಶಿವನು ಕಣ್ದೆರದು ನೋಡುವನು.) ದಯಾನಿಧೆ! ಈ ಕಿಂಕರನ ಅನಂತಾನಂತ ವಂದನೆಗಳನ್ನು ಸ್ವೀಕರಿಸು, ಕೃಪೆದೋರು.

**ಶಂಕರ:** ಯಮಧರ್ಮ! ಹೀಗೆ ಬಾ. ಕುಳಿತುಕೊ. ಬಹಳ ಸಮಯವಾಯಿತೆ ಬಂದು?

**ಯಮ:** ಇಲ್ಲ ದೇವ, ಈಗ ತಾನೇ ಬಂದುದು.

**ಶಂಕರ:** ಎಲ್ಲವೂ ಕುಶಲವಷ್ಟೆ? ಏಕೆ ಮುಖವು ಕಂದಿದಂತಿದೆ?

**ಯಮ:** ದೇವಾ! ತಮ್ಮಾಶೀರ್ವಾದಗಳಿಂದ ಎಲ್ಲವೂ ಕುಶಲ. ತಮ್ಮ ದರ್ಶನಾರ್ಥವಾಗಿ ತ್ವರೆಮಾಡಿ ಬಂದುದರಿಂದ ಮಾರ್ಗಾಯಾಸವಾಗಿ ಸ್ವಲ್ಪ ಬಳಲಿದಂತಿದೆ.

**ಶಂಕರ:** ವಿಶೇಷ ವಾರ್ತೆಗಳೇನಾದರಿವೆಯೆ?

**ಯಮ:** ವಿಶೇಷ ವಾರ್ತೆಯೆಂದರೆ, ಕಾರ್ಯ ಬಾಹುಲ್ಯದಲ್ಲಿ ಮೈ ಮರೆತು ಏನಾದರೊಂದು ತಪ್ಪು ಮಾಡುತ್ತೇವೆ. ಅದನ್ನು ಮನ್ನಿಸಿ ಸನ್ಮಾರ್ಗಕ್ಕೆ ತರುವವನು ನೀನಲ್ಲವೆ?

**ಶಂಕರ:** ಸತ್ಯ ಸತ್ಯ.

**ಯಮ:** ಹೀಗಿರಲು ಭೂಲೋಕದಲ್ಲಿ ನಡೆಯುತ್ತಲಿರುವ ಅತೃಪ್ತಿಕರವಾದ ವರ್ತನೆಯನ್ನು ತಡೆಯಲು ನಾವೆಲ್ಲರೂ ಪ್ರಭುವಿಂದ ಹಲಕೆಲವು ಸಲಹ ಸೂಚನೆಗಳನ್ನು ಪಡೆಯಬೇಕೆಂದು ತಮ್ಮ.........

**ಶಂಕರ:** ಅಹುದಹುದು. ಭೂಲೋಕದ ಪರಿಸ್ಥಿತಿ ಬಹು ಹೀನವಾಗಿ ಹೋಗಿದೆ. ಭೂದೇವಿ ಬಂದು ಗೋಳಿಟ್ಟು ಹೋದಳು. ಶೀಘ್ರದಲ್ಲಿ ಸರಿಪಡಿಸುತ್ತೇನೆಂದು ಹೇಳಿ ಸಂತೈಸಿ ಕಳಿಸಿರುತ್ತೇನೆ. ಅನೇಕಾನೇಕ ಋಷಿಪುಂಗವರೂ ಮೊರೆಯಿಟ್ಟರು. ಎಲ್ಲರಿಗೂ ಅಭಯ ಕೊಟ್ಟಿರುತ್ತೇನೆ.

ಇಂದ್ರನು ಎಂದಿನಂತೆಯೇ ಕಾರ್ಯದಕ್ಷನಾಗಿದ್ದಾನೆ. ಮರುತನೂ ಅಂತೆಯೆ. ವರುಣನೂ ಹಾಗೆಯೆ. ಯಾರೂ ಸೋಮಾರಿಗಳಾಗಿ ಕಾಣಲಿಲ್ಲ. ಇನ್ನು ನಿನ್ನನ್ನು ಕುರಿತು ಆಲೋಚಿಸಬೇಕೆಂದು....

**ಯಮ:** ಅದಕ್ಕಾಗಿಯೇ ಬಂದಿರುತ್ತೇನೆ.

**ಶಂಕರ** ಸರಿ. ನಿನ್ನ ಊಹೆಯ ಪ್ರಕಾರ ಈ ಭೂಲೋಕದಲ್ಲಿಯ ಹಾವಳಿಗೆ ಕಾರಣವೇನು ಯಮಧರ್ಮ?

**ಯಮ:** ಪ್ರಭೂ! ಮೊದಲನೆಯದಾಗಿ ಭೂಲೋಕದ ಜನರು ತಮ್ಮ ತಮ್ಮ ಕುಲಧರ್ಮಗಳನ್ನು ಬಿಟ್ಟು, ಕಾಯಕವನ್ನು ಮರೆತು ದುರ್ಮಾರ್ಗದಲ್ಲಿ ನಡೆಯುತ್ತಲಿರುವರು. ಎರಡನೆಯದಾಗಿ ಪ್ರತಿಯೊಬ್ಬನೂ ಪ್ರಾಪಂಚಿಕ ಸುಖಕ್ಕೆ ಮೋಹಗೊಂಡು ಅಸ್ಥಿರವಾದ ಸಂಸಾರ ಬಂಧನದಲ್ಲಿ ಸಿಲುಕಿ, ಕೈಗೆ ನಿಲುಕದ ಫಲಕ್ಕಾಗಿ ಹಾತೊರೆಯುತ್ತ ತಾಪತ್ರಯಗಳಿಗೆ ತುತ್ತಾಗಿ ಬಳಲುತ್ತಲಿರುವನು. ಮೂರನೆಯದಾಗಿ ಕೆಲವರಂತೂ ವಿಷಯಾಸಕ್ತರಾಗಿ, ದೇವತಾರಾಧನಾದಿಗಳನ್ನು ಮರೆತು, ಕೊಲೆ ಸುಲಿಗೆ ದರೋಡೆ ಮೊದಲಾದ ಕ್ರೂರ ಕೃತ್ಯಗಳನ್ನು ನಿತ್ಯಕರ್ಮಗಳನ್ನಾಗಿಮಾಡಿಕೊಂಡು ಮೆರೆಯುತ್ತಲಿದ್ದಾರೆ. ಹೀಗೆ ಅಧರ್ಮ ಪ್ರವರ್ತನೆಯಿಂದ ಜನಗಳಲ್ಲಿ ಅಸಂತುಷ್ಟಿ ಅತೃಪ್ತಿ ತಲೆದೋರಿವೆ.

**ಶಂಕರ:** ನಿಜ. ಇಂಥಾ ಧರ್ಮಬಾಹಿರರೇ ಲೋಕ ಕಂಟಕರು. ಸಜ್ಜನರ ಸಂಖ್ಯೆ ಅತ್ಯಲ್ಪವಾಗುತ್ತಲಿದೆ. ಇದ್ದವರಿಗೂ ಸುಖವಿಲ್ಲದಾಗಿದೆ. (ಸ್ವಲ್ಪ ಯೋಚಿಸಿ) ಅಲ್ಲ ಯಮಧರ್ಮ, ಇಂಥಾ ಪಾಪಿಗಳನ್ನು ಎಳೆತಂದು ಶಿಕ್ಷಿಸಬೇಕೆಂದು ಹೇಳಿ ನಿನಗೆ ಸರ್ವಾಧಿಕಾರವನ್ನು ಕೊಟ್ಟಿರಲಿಲ್ಲವೇ?

**ಯಮ:** ಪ್ರಭೂ! ಕ್ಷಮಿಸಬೇಕು. ತಾವು ಅಧಿಕಾರವನ್ನು ಕೊಟ್ಟಿದ್ದಿರಿ. ಅಂತೆಯೇ ಮಾಡುತ್ತಲಿರುವೆ. ಆದರೆ ಮತ್ತೊಂದು ವಿಷಯವನ್ನು ಅರಿಕೆಮಾಡಿಕೊಳ್ಳಲು ಅಂಜುತ್ತೇನೆ.

**ಶಂಕರ:** ಅಂಜಿಕೆಯೇಕೆ? ಮನಬಿಚ್ಚಿ ಮಾತನಾಡು. ಅನುಮಾನಗಳನ್ನು ಪರಿಹರಿಸಲು ನಾವಿರುವಾಗ ಏಕೆ ಸಂಕೋಚ? ನಾವು ಆಜ್ಞಾಪಿಸುವುದಕ್ಕೂ ನೀವು ಆಚರಿಸುವುದಕ್ಕೂ ತಾಳಮೇಳವಿಲ್ಲದೆ ಹೋದರೆ

ಏನಾಗಬಹುದೆನ್ನುವುದನ್ನು ವಿಚಾರಮಾಡಿ ನೋಡು.

**ಯಮ:** ಸ್ವಾಮಿ! ನಮ್ಮೊಳಗಿನ ತಪ್ಪು ತಿಳುವಳಿಕೆಗೆ ಆಸ್ಪದವೇ ಇಲ್ಲ. ಆದರೆ ಈಗೀಗ ಮಾನವರು ಮಾಯಾವಿಗಳಾಗುತ್ತ ಮೋಸದ ಬಲೆಯಿಂದ ತಮ್ಮನ್ನೂ ವಶಪಡಿಸಿಕೊಳ್ಳುತ್ತಲಿದ್ದಾರೆ.

**ಶಂಕರ:** ಏನದು ಯಮಧರ್ಮ, ಬಹು ಮಾರ್ಮಿಕವಾಗಿ ಮಾತನಾಡುತ್ತಿರುವಿ?

**ಯಮ:** ಕ್ಷಮಿಸಬೇಕು. ತಮ್ಮ ಮೃದು ಸ್ವಭಾವವನ್ನು ಮಾನವರು ಚೆನ್ನಾಗಿ ಅರಿತಿರುವರು. ಅವರಲ್ಲಿ ಬ್ರಾಹ್ಮಣರೆಂದೆನೆಸಿಕೊಳ್ವ ಮುಟ್ಠಾಳುಗಳು ತಮ್ಮ ಜೀವನೋಪಾಯಕ್ಕಾಗಿ ಹಲವಾರು ರೀತಿಯಲ್ಲಿ ತಮ್ಮನ್ನು ನಾಯಕರನ್ನಾಗಿಮಾಡಿಕೊಂಡು ಪುರಾಣೇತಿಹಾಸಗಳನ್ನು ರಚಿಸಿ, ಕಥೆ. ಕಾದಂಬರಿಗಳನ್ನು ಬರೆದು, ಎಲ್ಲಿ ನೋಡಿದರಲ್ಲಿ ತಮ್ಮ ಕಾರುಣ್ಯ ದಯಾರ್ದ್ರತ್ವಗಳನ್ನೇ ಬಣ್ಣಿಸುತ್ತಲಿದ್ದಾರೆ.

**ಶಂಕರ:** ಅದರಿಂದಾದ ತಪ್ಪೇನು?

**ಯಮ:** ಅರಿಕೆಮಾಡಿಕೊಳ್ಳುತ್ತೇನೆ. ಆಜೀವಪರ್ಯಂತ ಧರ್ಮಬಾಹಿರನಾಗಿ ಕೊನೆಗೊಮ್ಮೆ ತಮ್ಮ ನಾಮಸ್ಮರಣೆಯಿಂದಲೋ ಗಂಗೆಯಲ್ಲಿ ಧುಮುಕಿ ಪ್ರಾಣತ್ಯಾಗ್ಯ ಮಾಡುವುದರಿಂದಲೋ ಮೋಕ್ಷವನ್ನುಗಳಿಸಬಹುದೆನ್ನುವ ಸುಲಭೋಪಾಯವನ್ನು ಕಂಡಿಟ್ಟು ಪ್ರಕಟಿಸಿದ್ದಾರೆ. ಅದಕ್ಕೆ ತಮ್ಮ ಒಪ್ಪಿಗೆಯ ಮುದ್ರೆಯೂ ಬಿದ್ದಿದೆ. ಹೀಗಾಗಿ ಪ್ರತಿಯೊಬ್ಬನೂ ನಿರ್ಭೀತನಾಗಿ ಆದಷ್ಟು ದಿನ ಇಚ್ಛಾವರ್ತಿಯಾಗಿದ್ದು ಕೊನೆಗೊಮ್ಮೆ ತಮ್ಮ ನಾಮಸ್ಮರಣೆ ಮಾಡಿ ಮೋಕ್ಷವನ್ನು ಗಳಿಸುತ್ತಲಿದ್ದಾನೆ.

**ಶಂಕರ:** ಆದ್ದರಿಂದ........

**ಯಮ:** ಕ್ಷಮಿಸಿ ಬಿಡಿ. ಆದ್ದರಿಂದ ಇಂದಿನ ಭೂಲೋಕದಲ್ಲಿಯ ಅಲ್ಲೋಲ ಕಲ್ಲೋಲಗಳಿಗೆ ಕಾರಣಭೂತರು........

**ಶಂಕರ:** ನಾವೇ. (ಯಮನು ತಲೆ ಹಾಕುವನು.) ಮೂರ್ಖ. ಅವಿವೇಕ ಶಿಖಾಮಣಿ. ನೀನೇ ಕರ್ತವ್ಯವಿಮುಖನಾಗಿದ್ದು ನಮ್ಮ ಮೇಲೆ ಆರೋಪಣೆಯನ್ನು ಹೋರಿಸಲು ಸಿದ್ಧನಾಗಿದ್ದೀಯೆ. ಉದ್ಧಟ. ಅಂತ್ಯ

ಕಾಲದಲ್ಲಿ ನಮ್ಮ ಸ್ಮರಣೆ ಎಂಥೆಂಥಾ ಸಾಧಕರಿಗೆ ಬಾರದಿರುವಾಗ ಪಾಪಿಗಳಿಗೆ ಜ್ಞಾಪಕಕ್ಕೆ ಬರುತ್ತದಂತೆ. ಗಂಗೆಯಲ್ಲಿ ಮುಳುಗಿ ಪ್ರಾಣತ್ಯಾಗ ಮಾಡುತ್ತೇನೆನ್ನುವವಗೆ ಭೂಲೋಕದ ಮೋಹವೆಲ್ಲಿಯದು? ಸರ್ವಸ್ವವನ್ನು ತ್ಯಜಿಸಿ ಗಂಗೆಯಲ್ಲಿ ಶರಣುಬರುವುದೆಂದರೆ ಎಂಥಾ ನಿಗ್ರಹಶಕ್ತಿಯಾಗಿರಬೇಕು! ಅಂಥವರಿಗಲ್ಲದೆ ಮೋಕ್ಷವಿನ್ನಾರಿಗೆ?

**ಯಮ:** (ಚಕಿತನಾಗಿ) ತಪ್ಪಿದೆ ಪ್ರಭು.

**ಶಂಕರ:** ಪಾಪಿಗಳನ್ನು ಪ್ರಾಯವಿರುವಾಗಲೇ ಸೆಳೆದು ತಾರದಿದ್ದುದೇಕೆ? ಕಾಯಕ ಕೊಳ್ಳದವರನ್ನು ಕೊಲ್ಲದಿದ್ದುದೇಕೆ? ಮರೆಮೋಸ ಮಾಡುವವರನ್ನು ಸೆರೆಹಿಡಿಯದಿದ್ದುದೇಕೆ? ಭೂದೇವಿಗೆ ಹೊರಲಾರದಷ್ಟು ಪಾಪಿಗಳ ಹೊರೆಯನ್ನು ಹೊರಿಸಿದವನು ನೀನೇ ಅಲ್ಲವೆ?

**ಯಮ:** ಅಪರಾಧಿಯಾಗಿದ್ದೇನೆ ದೇವ.

**ಶಂಕರ:** ಪ್ರಾಣಿಗಳು ತಮ್ಮ ಪೂರ್ವಜನ್ಮದಲ್ಲಿ ಮಾಡಿದ ಪಾಪಗಳನ್ನು ಪರಿಹರಿಸಿಕೊಳ್ಳಲೋಸುಗ ಸೃಷ್ಟಿಸಲ್ಪಟ್ಟ ಪವಿತ್ರಕ್ಷೇತ್ರ, ಆ ಭೂಲೋಕ. ಅಂಥದನ್ನೂ ಪಾಪಕೂಪವನ್ನಾಗಿ ಮಾಡಿದವನು ನೀನೇ ಅಲ್ಲವೆ?

**ಯಮ:** ಹೌದು ತಂದೆ.

**ಶಂಕರ:** ಎಷ್ಟು ಕಾಲ ಇಂಥಾ ಖೂಳರನ್ನು ಪೋಷಿಸಬಲ್ಲಳು ಆ ಭೂದೇವಿ. ಈ ಪುಂಡರ ಹಾವಳಿಯಿಂದಲ್ಲವೆ ಅನ್ನನೀರುಗಳಿಗೆ ಅಭಾವ? ತಿನ್ನಲು ಗತಿಯಿಲ್ಲದ ಸಜ್ಜನ ದಾರಿಗೆ ಬುತ್ತಿಕಟ್ಟುವುದೆಂತು? ತಿರಿದು ತಿನ್ನುವವರಿಗೆ ಕರೆದು ಕೊಡದೆ ಮೆರೆದು ತಿನ್ನುವ ಕೂಳುಬಾಕರನ್ನೇಕೆ ಮುರಿದು ತಿನ್ನಬಾರದಿತ್ತು?

**ಯಮ:** ಎಡವಿ ಬಿದ್ದೆ ತಂದೆ. ಉದ್ಧರಿಸಬೇಕು.

**ಶಂಕರ:** ಅಜ್ಞಾನಿ. ನಿನ್ನ ತಪ್ಪನ್ನರಿಯದೆ ಇತರರಲ್ಲಿ ಹುಳುಕನ್ನಾರಿಸಲು ಹೊರಟದ್ದೀಯೆ. ನಡೆ, ಹೊರಡಿನ್ನು. ನೀನು ಕರ್ತವ್ಯದಕ್ಷನಾಗಿದ್ದರೆ ಯಾವ ತೊಂದರೆಯೂ ಬರುತ್ತಿರಲಿಲ್ಲ. ಒಮ್ಮೆ ಕೋಪೋದ್ರೇಕವಾದರೆ ಅಪ್ರಯೋಜಕನಾದ ನಿನ್ನನ್ನು ಸ್ಥಾನಚ್ಯುತನನ್ನಾಗಿ ಮಾಡಬೇಕೆನ್ನಿಸುತ್ತದೆ.

ನಮ್ಮ ಕರ್ತವ್ಯಗಳನ್ನು ಕುರಿತು ಇವನಿಗೆ ಟೀಕೆ ಟಿಪ್ಪಣಿಗಳಂತೆ.

**ಯಮ:** ಮಹದಪರಾಧವಾಗಿದೆ. ಮನ್ನಿಸಬೇಕೆಂದು ಅಡಿದಾವರೆಗಳಿಗೆ ಬಿದ್ದು ಕೇಳಿಕೊಳ್ಳುತ್ತೇನೆ. (ನಮಸ್ಕರಿಸುವನು.)

**ಶಂಕರ:** ಬಹಳ ಜಾಗ್ರತೆಯಿಂದ ವರ್ತಿಸು. ಇನ್ನು ಮುಂದೆ ಯಾರಿಂದಲಾದರೂ ನಿನ್ನ ಮೇಲೆ ಆರೋಪಣೆ ಬಂದರೆ ನಿನ್ನ ಪದವಿಗೇ ಭಂಗ. ಹೊರಡಿನ್ನು. (ಶಂಕರನು ಕಣ್ಣುಮುಚ್ಚಿ ಕುಳಿತುಕೊಳ್ಳುವನು. ಯಮನು ಕೈಮುಗಿದು ಮುಂದಕ್ಕೆ ಬರುವನು.)

[ಅರಣ್ಯದ ತೆರೆ ಬೀಳುವುದು.]

**ಯಮ:** ಒಂದು ಗಂಡಾಂತರ ಗೆದ್ದ ಹಾಗಾಯಿತು. ಉಳಿದ ಅಧಿಕಾರಿಗಳಾರೂ ಇರಲಿಲ್ಲ. ಇದ್ದಿದ್ದರೆ ಇನ್ನೂ ಮುಖ ತಗ್ಗಿಸಬೇಕಿತ್ತು. ಎಷ್ಟಾದರೂ ಪ್ರಭು ದಯಾಮಯನು. ನಾನಿನ್ನು ಕಾರ್ಯತತ್ಪರನಾಗದಿದ್ದರೆ ಈತನ ಕೋಪಾಗ್ನಿಗೆ ತುತ್ತಾಗಬೇಕಾದೀತು. ನನ್ನ ಸಂಶೋಧನೆಯು ಮುಗಿಯುವ ವರೆಗೂ ತಲೆತಗ್ಗಿಸಿಕೊಂಡಿರಬೇಕು. ಆದಷ್ಟು ಶೀಘ್ರವಾಗಿ ಸಂಶೋಧನೆಯನ್ನು ಪ್ರಾರಂಭಿಸಲು ಹೊರಟೆ. (ತೆರಳುವನು.)

---

## ದೃಶ್ಯ ೨

[ಆಚಾರ್ಯನ ಭೂಲೋಕದಲ್ಲಿಯ ಮನೆ. ಪ್ರಾತಃಕಾಲದ ಸಮಯ. ವೆಂಕಮ್ಮನು ದುಃಖಿಸುತ್ತ ಕುಳಿತಿದ್ದಾಳೆ. ಪುಟ್ಟುವಿನ್ನೂ ಮಲಗಿದ್ದಾನೆ]

**ವೆಂಕಮ್ಮ:** ಸ್ವಾಮಿ, ಕರುಣಾಳು! ಎಂಥಾ ಆಪತ್ತಿಗೆ ಗುರಿಯಾದೆ! ದೇವ. ಎರಡು ದಿನಗಳಾದರೂ ಈ ಮಹಾನುಭಾವರು ಮನೆಗೆ ಬರಲಿಲ್ಲ.! ಎಂದೂ ಹೀಗೆ ಮಾಡಿದವರಲ್ಲ. ಊರುಕೇರಿಗಳಲ್ಲಿ ಎಲ್ಲರಿಗೂ ಬೇಕಾದವರು. ಆರೋಗ್ಯಭಾಗ್ಯವೂ ಚನ್ನಾಗಿಯೇ ಇದ್ದಿತು. ಯಾವ ಕೆಟ್ಟ ಮಾತನ್ನಾಡಿಕೊಳ್ಳಲೂ ಮನಬರುವದಿಲ್ಲ. (ಸ್ವಲ್ಪ ಯೋಚಿಸಿ) ಯೋಚಿಸಿ

ಫಲವಿಲ್ಲ. ಸ್ವಾಮಿ! ಪತಿದೇವನನ್ನು ಬರಮಾಡು ತಂದೆ.

**ಪುಟ್ಟು:** (ಮೇಲಕ್ಕೆದ್ದು) ಅಮ್ಮಾ ಅಪ್ಪ ಬಂದರೆ?

**ವೆಂಕಮ್ಮ:** ಇಲ್ಲ ಮಗು, ಇನ್ನೂ ಬರಲಿಲ್ಲ.

**ಪುಟ್ಟು:** ಕರೆಯಲಿಕ್ಕೆ ಹೋಗಿದ್ದ ಹನುಮಣ್ಣ ಬಂದನೆ?

**ವೆಂಕಮ್ಮ:** ಆತನೂ ಇಲ್ಲ ಕಂದ.

**ಪುಟ್ಟು:** ಯಾಕಮ್ಮ ಅಪ್ಪ ಹೋದದ್ದು?

**ವೆಂಕಮ್ಮ:** ದೇವರಿಗೆ ಗೊತ್ತು ತಂದೆ.

**ಪುಟ್ಟು:** ನಿನಗೇಕಮ್ಮ ಹೇಳಿ ಹೋಗಲಿಲ್ಲ?

**ವೆಂಕಮ್ಮ:** ಅದು ನನ್ನ ಗ್ರಹಚಾರ.

**ಪುಟ್ಟು:** ಯಾವ ಊರಿಗೆ ಹೋಗಿದ್ದಾರಮ್ಮಾ?

**ವೆಂಕಮ್ಮ:** ಅದು ಗೊತ್ತಿದ್ದರೆ ಇಷ್ಟೇಕೆ ತೊಂದರೆಯಿತ್ತು ನನ್ನಪ್ಪಾ.

**ರೈತ:** (ಪ್ರವೇಶಿಸಿ) ಅಮ್ಮಾ! ಅಪ್ಪಾ ಅವರು ಬಂದಾರಾ?

**ವೆಂಕಮ್ಮ:** ಇಲ್ಲಪ್ಪಾ, ಇನ್ನೂ ಅವರ ಸುಳಿವೇ ಇಲ್ಲ.

**ರೈತ:** ಹೀಂಗ್ಯಾಕೆ ಮಾಡಿದ್ರಮ್ಮಾ? ತಮಗೊಂದು ಮಾತು ಹೇಳಿ ಹೋಗಿದ್ರೆ ಪಾಡಿತ್ತು.

**ವೆಂಕಮ್ಮ:** ಪಾಡಿತ್ತು. ಆದರೆ ಹೇಳಿ ಹೋಗಿಲ್ಲಣ್ಣ.

**ಹನುಮ:** (ಪ್ರವೇಶಿಸಿ) ಅಮ್ಮಾ, ಸುತ್ತೂ ಮುತ್ತೂ ಹತ್ತೆಂಟು ಹಳ್ಳಿ ಸುತ್ತಿ ಬಂದೆ. ಎಲ್ಲೀ ಇಲ್ಲ ಅಪ್ಪಾ ಅವರು.

**ವೆಂಕಮ್ಮ:** ಇಲ್ವೆ? ಸ್ವಾಮಿ. (ರೋದಿಸುವಳು.)

**ರೈತ:** ಇನ್ನೆಲ್ಲಿಗೆ ಹೋಗಿರಬಹುದಣ್ಣಾ?

**ಹನುಮ:** ಹ್ಯಾಂಗೆ ಹೇಳೋದಪ್ಪ. ಹೀಂಗೆ ಎಂದೂ ಹೋದೋರಲ್ಲ.

**ರೈತ:** ಭಾರೀ ವಿಚಿತ್ರದ ಮಾತಿದು.

**ವೆಂಕಮ್ಮ:** (ರೋದಿಸುತ್ತ) ಇನ್ನೆಲ್ಲಿ ಹುಡುಕಲಿ, ಯಾರನ್ನು ಕೇಳಲಿ? ಕೇಳಿದವರಿಗೆ ಏನೆಂದು ಹೇಳಲಿ?

**ಪುಟ್ಟು:** ಯಾಕಮ್ಮ ಅಳೋದು? ನೀನು ಅಳುಬೇಡಮ್ಮ. ಅಪ್ಪ ಸಂಜಿಗೆ ಬಂದರೂ ಬರಲಿ ಬಿಡಮ್ಮ.

**ರೈತ:** ಧೈರ್ಯ ಬಿಡಬ್ಯಾಡ ತಾಯಿ. ನಾನೂ ಹೋಗಿ ನಮ್ಮೂರಿಗೆ ಹೋಗ್ಯಾರೇನೊ ನೋಡ್ತೇನೆ. ಇದ್ದರೆ ಜಲ್ದೀ ಕರಕೊಂಡು ಬರ್ತೇನೆ.

**ಹನುಮ:** ಹೋಗಣ್ಣ, ಅಷ್ಟಾದರು ಮಾಡು. ಜಲ್ದೀ ಬಾ. ಇಲ್ಲಾದ್ರೆ ಅವರನ್ನೇ ಕಳಿಸಿಬಿಡು.

**ರೈತ:** ನಾನು ಹೋಗಿ ಬರ್ತೇನೆ ತಾಯಿ.

**ವೆಂಕಮ್ಮ:** ಅಯ್ತಪ್ಪಾ ಕೂಡಲೆ ಹೋಗಿ ಬಾ.

**ರೈತ:** ಬರ್ತೇನಪ್ಪ ಹನುಮಣ್ಣ, ಶರಣು.

**ಹನುಮ:** ಶರಣಪ್ಪಾ, ಹೋಗಿ ಬಾ. (ರೈತ ತೆರಳುವನು.)

**ಭಾಗೀ:** (ಪ್ರವೇಶಿಸಿ) ಯಂಕಮ್ಮಾ ಯಂಕಮ್ಮಾ, ಬಂದಾರೇನವ್ವಾ?

**ವೆಂಕಮ್ಮ:** ಇಲ್ರೀ ಇನ್ನೂ ಬರಲಿಲ್ಲ.

**ಭಾಗೀ:** ಎಲ್ಲಿಗೆ ಹೋಗಿದ್ರಂತೆ? ಇದೇನವ್ವಾ ಅಳ್ತೀಯಲ್ಲಾ? ಬೈದ್ರೇನು? ಯಜಮಾನರ ಮಾತು ಹಚ್ಚಿಕೋಬಾರ್ದು ಬಿಡು.

**ಹನುಮ:** ಅವ್ವಾರೇ ಇನ್ನೂ ಬಂದಿಲ್ಲ.

**ಭಾಗೀ:** ಅಯ್ಯೋ ಹೀಗ್ಯಾಕೆ ಮಾಡಿದೀತ? ಹೇಳ್ದಾ ಕೇಳ್ದಾ ಹೋಗಿ ಬಿಟ್ಟಾನೆ. ಅಯ್ಯೋ ದೇವರೆ; ಎರಡು ದಿನದ ಹೊತ್ತಾಯ್ತು.

**ವೆಂಕಮ್ಮ:** ಎರಡು ದಿನದ ಹೊತ್ತಾಯಿತು. (ರೋದಿಸುವಳು.)

**ಭಾಗೀ:** ಬರ್ತಾರೆ ಬಿಡವ್ವಾ, ಅಳಬೇಡ. ಅವರೇನು ಸಣ್ಣ ಹುಡುಗರೇ? ತಿಳಿವಳಿಕೆ ಇಲ್ದೋರೆ? ಬರ್ತಾರೆ, ಏಳೇಳು. ಹುಡುಗ್ಗೇ ಹೊತ್ತಾಗ್ತದೆ ಸ್ನಾನಮಾಡು ನಡೆ.

**ವೆಂಕಮ್ಮ:** ಯಾರಿಗೆ ಬೇಕ್ರೀ ಸ್ನಾನ?

**ಹನುಮ:** ಏಳಮ್ಮ ಹೀಂಗ್ಯಾಕೆ ಮಾಡ್ತೀರಿ? ಮತ್ತೆ ಹುಡುಕ್ಕೊಂಡು ಬರೋಕೆ ಹೋಗ್ತೇನೆ. ಅವರೇನು ಜಗಳ ಮಾಡ್ಕೊಂಡು ಹೋಗ್ಯಾರ್ಯಾ? ಏನಿಲ್ಲ. ಬರ್ತಾರೇಳ್ರಿ.

**ಭಾಗೀ:** ಯಂಕಮ್ಮಾ ನನ್ಮಾತು ಕೇಳಿಲ್ಲಿ, ವ್ಯಾಲಕ್ಕೇಳು. ಹುಡುಗನ್ನ ಕರಕೊಂಡು ಪ್ರಾಣದೇವರ ಗುಡಿಗೆ ಹೋಗಿ ದೀಪ ಹಚ್ಚಿಟ್ಟು, ನಮಸ್ಕಾರ ಹಾಕಿಕೊಂಡು ಬಾ ಹೋಗು. ದೇವರು ಒಳ್ಳೇದು ಮಾಡ್ತಾರೆ.

ನಿಮ್ಮ ಯಜಮಾನರು ಸಂಜೀವೊಳಗೆ ಬರ್ತಾರೇಳು. ನನ್ಮಾತು ಕೇಳು.

**ಪುಟ್ಟು:** ಹೌದೇಳಮ್ಮ. ದೇವರಿಗೆ ದೀಪಹಚ್ಚಿ ಬೇಡಿಕೊಂಡು ಬರೋಣ. ಅಪ್ಪ ಬಂದರೆ ಇನ್ನೊವ್ಮೆ ಹೀಗೆ ಹೋಗಬೇಡಾ ಅಂತ ಹೇಳ್ತೀನೆ.

**ಹನುಮ:** ಅವ್ವಾರೆ, ಏಳ್ರೀ. ಹುಡುಗ ಧೈರ್ಯ ಹೇಳ್ತಾನೆ. ನೀವ್ಯಾಕಮ್ಮಾ ಹೀಂಗೆ ಮಾಡ್ತೀರಿ? ಗುಡೀ ತಾವ ನಾನೂ ಬರ್ತೀನೆ ಏಳ್ರಿ.

**ವೆಂಕಮ್ಮ:** ಆಗ್ಲಪ್ಪಾ ಏಳ್ತೀನೆ.

**ಭಾಗೀ:** ಅಷ್ಟು ಮಾಡವ್ವ. ನಾನೂ ಮನೆಗೆ ಹೋಗಿ ದೀಪಕ್ಕೆ ಹಾಕ್ಕೊಂಡು ಗುಡೀ ಹತ್ರ ಬರ್ತೀನೆ ಯಂಕಮ್ಮಾ.

**ವೆಂಕಮ್ಮ:** ಒಳ್ಳೇದ್ರಿ. (ಭಾಗೀರತಿಬಾಯಿ ತೆರಳುವಳು. ವೆಂಕಮ್ಮ ದೀಪಗಳನ್ನು ತೆಗೆದುಕೊಂಡು ಬರುವಳು. ಎಲ್ಲರೂ ಕೂಡಿ ತೆರಳುವರು.)

(ರಾಜಮಾರ್ಗದ ತೆರೆ ಬೀಳುವುದು.)

---

## ದೃಶ್ಯ ೩

[ಯಮಪುರಿಯ ರಾಜಮಾರ್ಗ. ಚಂಡ ವಿಕ್ರಮರು ವಿರುದ್ಧ ದಿಕ್ಕುಗಳಿಂದ ಪ್ರವೇಶಿಸುವರು.]

**ಚಂಡ:** ಏನಣ್ಣಾ ಎಲ್ಲಿಂದ ಬಂದೆ? ಬಹಳ ಹೊತ್ತಿನಿಂದ ಕಾಣಲಿಲ್ಲ?

**ವಿಕ್ರಮ:** ನಾನು ಅಪ್ಪಾ ಅವರ ಮನೇಲಿ ಇದ್ದೆ ಕಣೊ. ಅಲ್ಲಿಂದ್ಲೇ ಬರ್ತಾ ಇದೇನೆ. ನೀನು ಮನೆಗೆ ಹೋಗಿ ಬರ್ತೀನಂತ ಹೇಳಿ ಹಾಗೇ ಹೋಗ್ಬಿಟ್ಟೆ. ನಾನು ಅಪ್ಪಾ ಅವರು ಸ್ನಾನಕ್ಕೆ ಹೋಗೋಣ ಅಂತ ಹೇಳಿದ್ರು, ಸ್ನಾನಘಟ್ಟಕ್ಕೆ ಹೋಗಿ ಸ್ನಾನಮಾಡ್ಕಿಕೊಂಡು ಬಂದೆ.

**ಚಂಡ:** ಇನ್ನೇನು ಪೂಜೆ ನಡೆಯುತ್ತೆ ಏನೋ ಅಲ್ಲ?

**ವಿಕ್ರಮ:** ಪೂಜೆ ಆಗಲೆ ಪ್ರಾರಂಭವಾಯ್ತು. ಪೂಜೆ ಮುಗಿಯೋಕೆ

ಇನ್ನೂ ಸ್ವಲ್ಪ ಹೊತ್ತು ಬೇಕು. ಹಾಗೇ ಸುತ್ತಿಕೊಂಡು ಪ್ರಸಾದದ ಹೊತ್ತಿಗೆ ಬಂದ್ರಾಯ್ತು ಅಂತ ಬಂದೆ.

**ಚಂಡ:** ಅದೇನು ಪ್ರಸಾದ ಮಾಡ್ತಾರಣ್ಣ! ಎಂಥಾ ಅಡಿಗೆ ಮಾಡ್ತಾರೆ! ಆ ಊಟ ನೆನಸಿಕೊಂಡ್ರೆ– ಅದೇನಂತ ಹೇಳಲಿ. ಎಷ್ಟು ರುಚಿ! ಉಂಡಷ್ಟೂ ಉಣ್ಬೇಕನಿಸುತ್ತೆ.

**ವಿಕ್ರಮ:** ಇದೆಲ್ಲ ನಮ್ ಪುಣ್ಯಾನಪ್ಪ. ಬಾಯ್ ತುಂಬಾ ರುಚಿ ರುಚಿ ಊಟವಾದ್ರು ಸಿಕ್ಕುತ್ತೆ.

**ಚಂಡ:** ಇದೇ ರೀತಿ ನಾಲ್ಕು ಕಾಲ ಸಾಗ್ತಾ ಇರಲಿ ಅಂತ ಹರಕೆ ಹೊರ್ತೀನೆ ನಾನಂತು.

**ವಿಕ್ರಮ:** ಇದೇ ರೀತಿ ಸಾಗಿದ್ರೆ ಚನ್ನಾಗಿ ಮೇದು ವಸ್ತಾದಿ ಆಗ್ತೀ ಕಣೊ ನೀನು. ಆದರೆ ಈ ವಿಷಯ ಮಟ್ಟಿಗೂ ಯಾರಿಗೂ ತಿಳಿಬಾರ್ದು ನೋಡು. ತಿಳಿದ್ರೆ ನಮ್ಬಾಯಾಗೆ ಮಣ್ಣು.

**ಚಂಡ:** ಇಲ್ಲಪ್ಪಾ ನಾನಂತು ದೇವ್ರಾಣೆ ಯಾರಿಗೂ ಹೇಳೋಕಿಲ್ಲ. ಮನೆಯಲ್ಲಿ ಸಹಾ ಗಟ್ಟಿಯಾಗಿ ಮಾತಾಡೋದಿಲ್ಲ.

**ವಿಕ್ರಮ:** ಅಲ್ಲಲೋ ಅದಿರ್ಲಿ. ನಿನ್ತಾವ ಒಂದು ವಿಷಯ ಕೇಳ್ಬೇಕಂತ ಇದ್ದೆ. ಜ್ಞಾಪಕವಾಯ್ತು, ಕೇಳ್ಬಿಡ್ತೀನೆ. ಅಪ್ಪಾ ಅವರು ಒಂದೆರಡು ಸಲ ನಿನ್ತಾವ ಏನೇನೋ ಮೆತ್ಗೆ ಮಾತ್ನಾಡ್ತಾ ಇದ್ದರಲ್ಲೋ?

**ಚಂಡ:** ಅದಾ– ಹೇಳ್ತೀನೆ. ಯಾರಿಗೂ ತಿಳಿಸ್ಬೇಡ ಅಂತ ಹೇಳಿದಾರೆ. ಗುಟ್ಟನಾಗಿರ್ಲಿ. ಒಂದೆರಡು ಕಾಗದ ಬರ್ದು ಇವನ್ನ ಟಪಾಲಿಗೆ ಹಾಕಿ ಬಾ ಅಂತ ಹೇಳಿದ್ರು. ಯಾರಿಗೂ ತೋರಿಸೋದು ಬೇಡ, ಅವು ಸರಕಾರದ ಕಾಗದ ಅಂತ ಹೇಳಿದ್ರು. ನೀನು ಸಹಾ ಯಾರಿಗೂ ಹೇಳ್ಬೇಡಪೋ.

**ವಿಕ್ರಮ:** ನಾನು ತುಂಬಾ ಹುಷಾರಿ ಇರ್ತೀನೆ. ನಾನು ಕೇಳಿದ್ಹಾಂಗೆ ಮತ್ತೆ ಯಾರಾದ್ರು ಕೇಳಿದ್ರೆ ಹೀಗೇ ಹೇಳ್ಬೇಡಯ್ಯ. ತಿಂಬೋ ಅನ್ನ ಕಳಕೊಳ್ಬೇಕಾದೀತು.

**ಚಂಡ:** ಸತ್ತಾಗೂ ಇಲ್ಲಪೋ. ನೀನು ಈ ವಿಷಯ ಎತ್ತಿದ್ದು ಒಳ್ಳೇದೆ ಆಯ್ತು ನೋಡು. ಮತ್ತೊಂದು ಪತ್ರ ಕೊಟ್ಟಿದ್ರು. ಮರ್ತು ಮನೇಲೆ

ಬಿಟ್ಬಂದೆ. ಕೂಡ್ಲೆ ಹೋಗಿ ಟಪಾಲಿಗೆ ಕಳಿಸಿ ಬರ್ತೀನೆ. (ಹೋಗಲು ಮುನ್ನಡೆಯುವನು.)

**ವಿಕ್ರಮ**: ಸ್ವಲ್ಪ ತಾಳೋ. ಒಂದು ಹೊಸ ಮಾತು ಕೇಳಿದಿಯಾ?

**ಚಂಡ**: ಏನಣ್ಣಾ ಅದು?

**ವಿಕ್ರಮ**: ನಮ್‌ರಾಯರು ಯಾವುದೋ ಊರಿಗೆ ಹೋಗಿದಾರಂತೆ.

**ಚಂಡ**: ಅಷ್ಟೇ ಅಲ್ಲವೋ. ಈಗಿನ ಬಿಸಿಬಿಸಿ ಸುದ್ದೀ ನೀನು ಕೇಳಿಲ್ವೇನೊ?

**ವಿಕ್ರಮ**: ಇಲ್ಲ. ನಾನು ಬೇರೆ ಕೆಲ್ಸದ ಮೇಲೆ ಹೋಗಿದ್ದೆ. ಏನದು?

**ಚಂಡ**: ನಿನ್ನೆ ದಿನವೇ ಡಂಗೂರ ಹಾಕಿದರಂತೆ. ನಮ್ಮ ಮನೇಲಿ ಹೇಳಿದ್ರು. ಕೇಳ್ದೆ, ಬಲು ಸಂತೋಷವಾಯ್ತು. ನೀನೂ ಕೇಳೀದಿ ಅಂತ ಅಂದ್ಕೊಂಡೆ.

**ವಿಕ್ರಮ**: ಇಲ್ಲಲೋ ಅದೇನು ಜಲ್ದೀ ಹೇಳ್ಬಾರ್ದೆ.

**ಚಂಡ**: ನಮ್ ರಾಯರು ಊರಿಗೆ ಹೋಗೋ ಕಾಲಕ್ಕೆ ಒಂದು ಪತ್ರ ಬರೆದು ಕಳ್ಸಿದಾರಂತೆ.

**ವಿಕ್ರಮ**: ಏನಂತ? ಯಾರಿಗೆ?

**ಚಂಡ**: ಅವ್ರು ಊರಿಗೆ ವಾಪಾಸು ಬರೋ ವರೆಗೆ ನಮ್ಮ ಅಪ್ಪಾ ಅವರೇ ದೊರೆಗಳಾಗಿರಬೇಕಂತೆ.

**ವಿಕ್ರಮ**: ನಿಜವಾಗು?

**ಚಂಡ**: ನನ್ನಾಣೆಯಾಗು. ನಮ್ಮವಳೆ ಹೇಳಿದ ಮಾತು.

**ವಿಕ್ರಮ**: ಸ್ವಾಮಿ! ಆತ ಹಾಗೆ ಹೋಗ್ಲಯ್ಯ. ಬರೋದು ಬೇಡ. ಏನ್ ತೊಂದರೆ ಕೊಡ್ತಾ ಇದ್ದ ಮಾರಾಯ. ಈಗೇನೊ ಎರಡು ದಿನ ಸ್ವಲ್ಪ ಮೇಲು. ಅದಕ್ಕೂ ಮೊದಲು ಎಂಥಾ ಹಿಂಸೆ! ಅಲ್ಲಲೋ ಅಪ್ಪಾ ಅವರು ಈ ಸುದ್ದೀ ನಮ್ಗಾವ ಹೇಳಿಲ್ಲ ನೋಡು. ಎಂಥಾ ದೊಡ್ಡ ಜನ!

**ಚಂಡ**: ಇದೆಲ್ಲ ಏನು ಲೆಕ್ಕ ಅವರಿಗೆ. ಅವರ ಪೂಜೆ ಪುನಸ್ಕಾರ ಆದರೆ ಆಯ್ತು. ಒಂದ್ನಾಟದ ಜನರೇ ಅಲ್ಲ.

**ವಿಕ್ರಮ**: ಆಗ್ಲಪ್ಪ. ನೀನಿನ್ನು ಹೋಗು. ಕೂಡ್ಲೆ ಅವರ ಪತ್ರ ಹಾಕಿ

ಬಿಟ್ಟು ಆ ಕಡೆ ಬಾ. ಪೂಜೆ ಮುಗಿತಾ ಬಂದಿದ್ರೆ ಕಾದಿದ್ದು ಅಡಿಗೆ ಏರ್ಪಾಟು ಮಾಡಿಸ್ತೇನೆ.

**ಚಂಡ:** ಒಳ್ಳೇದು ನಡಿಯಣ್ಣ. ಜಲ್ದೀ ಬರ್ತೇನೆ. (ತೆರಳುವರು.)

---

## ದೃಶ್ಯ ೪

[ಯಮನ ಆಸ್ಥಾನ. ಸಿಂಹಾಸನದ ಬಳಿಯಲ್ಲಿರುವ ಆಸನದ ಮೇಲೆ ಆಚಾರ್ಯನು ಕುಳಿತಿದ್ದಾನೆ. ಚಿತ್ರಗುಪ್ತನು ಪಕ್ಕದಲ್ಲಿ ಕುಳಿತುಕೊಂಡಿದ್ದಾನೆ. ಓರ್ವ ಸೇವಕನು ಗಾಳಿಹಾಕುತ್ತಲಿದ್ದಾನೆ.]

**ಆಚಾರ್ಯ:** ಚಿತ್ರಗುಪ್ತರೇ! ತಮ್ಮ ಪ್ರಭು ಕೂಡಲೆ ಬರಲಿಕ್ಕಿಲ್ಲವೆಂದು ನಾನು ಈ ಮೊದಲೇ ಹೇಳಲಿಲ್ಲವೆ? ಈ ಅನಂತ ಸಂಸಾರವನ್ನು ನಮ್ಮ ಕೊರಳಿಗೆ ಹಾಕಿ ಹೋದರೆ ಹೇಗೆ ನೋಡಿ. ಯಾರ್ಯಾರೋ ಬರುತ್ತಾರೆ, ಏನೇನೋ ಕೇಳುತ್ತಾರೆ. ಎಲ್ಲರಿಗೂ ಸದುತ್ತರವನ್ನು ಕೊಡಬೇಕು. ಯಾರನ್ನೂ ನಿರಾಕರಿಸಲು ಬರುವುದಿಲ್ಲ.

**ಚಿತ್ರಗುಪ್ತ:** ಹಾಗೆ ನಿರಾಕರಿಸುವುದು ತಮ್ಮಿಂದಾಗದ ಮಾತು.

**ಆಚಾರ್ಯ:** ಸುಮ್ಮನೆ ಕುಳಿತರೆ ಯಾರು ಏನೆಂದುಕೊಳ್ಳುತ್ತಾರೊ, ಅದು ನನ್ನ ಭೀತಿ. ಅದೂ ಮೇಲಧಿಕಾರಿಗಳಿಂದ ಮಾತು ಬಂದರೆ ನಮ್ಮ ಯೋಗ್ಯತೆಗೇನೆ ಕುಂದು. ಇಲ್ಲಿಯ ವರೆಗೆ ಇಂಥಾ ಕೆಲಸವನ್ನು ಸಾಂಗೋಪಾಂಗವಾಗಿ ಮಾಡಿದ ಯಮಧರ್ಮನನ್ನು ಅಭಿನಂದಿಸುತ್ತೇನೆ.

**ಚಿತ್ರಗುಪ್ತ:** ಶ್ರೀಗಳು ಚಿತ್ತೈಸಬೇಕು. ತಮ್ಮ ಸಾಮರ್ಥ್ಯ ಯಮ ಧರ್ಮರಿಗಿಲ್ಲ. ಕೇವಲ ಭೀಕರತೆಯಿಂದ ಪ್ರಜೆಗಳು ತಮ್ಮ ಬಳಿಸುಳಿಯ ದಂತೆ ಮಾಡಿ ಬಿಡುತ್ತಾರೆ. ಆದ್ದರಿಂದ ಅವರಿಗಷ್ಟು ಕೆಲಸವಿಲ್ಲ. ಪೂಜೆ ಗಳಿಗೂ ಅವರಲ್ಲಿ ಅಷ್ಟೊಂದು ಗೌರವವಿಲ್ಲ.

**ಆಚಾರ್ಯ:** ನಾರಾಯಣ, ನಾರಾಯಣ.

 

**ಚಿತ್ರಗುಪ್ತ**: ಈಗೆರಡು ದಿನಗಳಲ್ಲಿ ತಮ್ಮಿಂದ ಆದಷ್ಟು ಉಪಕಾರ ಯಮಧರ್ಮರಿಂದ ಎಂದೂ ಆಗಿಲ್ಲ. ಇದು ನನ್ನ ಅನುಭವ. ಹೆಚ್ಚೇನು— ಜನರಾಗಲೇ ತಾವೇ ಚಿರವಾಗಿ ಈ ಪಟ್ಟವನ್ನಲಂಕರಿಸಲೆಂದು ಹಾರೈಸುತ್ತ ಲಿದ್ದಾರೆ.

**ಆಚಾರ್ಯ**: ಸರಿ ಸರಿ. ಇದೊಳ್ಳೆಯ ಜನ. ಕೆಲಸ ಮಾಡಲಿಕ್ಕೂ ಬಿಡಲಿಕ್ಕೂ ನಾವಾರು? ಪರಮಾತ್ಮ ಪ್ರೇರಿಸಿದಂತೆ ಮಾಡುವವರು ನಾವು, ಅಷ್ಟೇ.

**ಚಿತ್ರಗುಪ್ತ**: ಭಗವದ್ಭಕ್ತರ ಮಾತೇ ಹಾಗೆ.

[ಓರ್ವ ಸೇವಕನು ಒಂದು ಪತ್ರವನ್ನು ತೆಗೆದುಕೊಂಡು ಪ್ರವೇಶಿಸುವನು.]

**ಸೇವಕ**: ಪ್ರಭುಗಳಿಗೆ ವಿಜಯವಾಗಲಿ. ಒಡೆಯರಡಿದಾವರೆಗಳಿಗೆ ಅಂಚೆಯಾಳು ತಂದೊಪ್ಪಿಸಿದ ಪತ್ರವಿದು.

**ಆಚಾರ್ಯ**: ಚಿತ್ರಗುಪ್ತರೆ! ತೆಗೆದುಕೊಳ್ಳಿ, ನೋಡಿ. (ಮಂತ್ರಿಯು ಪತ್ರವನ್ನು ತೆಗೆದುಕೊಂಡು ನೋಡುವನು.)

**ಚಿತ್ರಗುಪ್ತ**: ಇದು ಪ್ರಭು ಶಂಕರನಿಂದ.

**ಆಚಾರ್ಯ**: ಶಂಕರನಿಂದಲೆ! ಏನೆಂದು ಆಜ್ಞಾಪಿಸಿದ್ದಾರೆ?

**ಚಿತ್ರಗುಪ್ತ**: (ಆಶ್ಚರ್ಯದಿಂದ) ಜೈ, ಶ್ರೀಮದಾಚಾರ್ಯರಿಗೆ ಜೈ.

**ಆಚಾರ್ಯ**: (ಆಶ್ಚರ್ಯವನ್ನು ನಟಿಸಿ) ಏನದು ಚಿತ್ರಗುಪ್ತರೆ?

**ಚಿತ್ರಗುಪ್ತ**: ನೂತನ ಮಹರಾಜಾಧಿರಾಜ ಶ್ರೀಮದಾಚಾರ್ಯರಿಗೆ ಜೈ. ಪ್ರಭುಗಳಿಗೆ ಅಭಿನಂದನೆಗಳು. ಶಂಕರನಾಜ್ಞೆಯಾಗಿದೆ, ತಾವಿನ್ನು ನಮ್ಮೊಡೆಯರು.

**ಆಚಾರ್ಯ**: ಆಶ್ಚರ್ಯ! ಓದಿ, ನೋಡುವ ಏನೆಂದು ಒಕ್ಕಣಿಸಿದ್ದಾರೆ.

**ಚಿತ್ರಗುಪ್ತ**: ಮಹಾರಾಜರವರು ಚಿತ್ತೈಸಬೇಕು—

"ಯಮಪುರೀ ನಾಗರಿಕರಿಗೆ ಈ ಮೂಲಕ ಪ್ರಕಟಿಸುವುದೇನೆಂದರೆ- ಯಮಧರ್ಮನು ಕಾರ್ಯವಿಮುಖನಾಗಿ ಹಲವಾರು ಅಯೋಗ್ಯ ಕೃತ್ಯಗಳನ್ನು ಕೈಕೊಂಡು ನಮ್ಮ ಕೋಪಾವೇಶಕ್ಕೆ ಗುರಿಯಾಗಲು ಅವನನ್ನು ಸ್ಥಾನ ಚ್ಯುತನನ್ನಾಗಿ ಮಾಡಲಾಗಿದೆ. ಇಂದಿನಿಂದ ಅವನಿಗೂ ನಿಮಗೂ ಯಾವ

ಸಂಬಂಧವೂ ಇರಲಾಗದು. ರಾಜ್ಯಾಡಳಿತೆಯನ್ನು ವಹಿಸಲು ಪ್ರಕೃತದಲ್ಲಿ ಆಡಳಿತೆಯನ್ನು ವಹಿಸಿರುವ ಆಚಾರ್ಯರನ್ನೇ ಹಂಗಾಮಿಯಾಗಿ ನಿಯಮಿಸಲಾಗಿದೆ. ಯಮಧರ್ಮನೊಡನೆ ಸಂಬಂಧ ಬೆಳಸಿದವರಿಗೂ ಆಚಾರ್ಯರ ಆಜ್ಞೆಯನ್ನುಲ್ಲಂಘಿಸಿದವರಿಗೂ ಕಠಿಣ ಶಿಕ್ಷೆ ವಿಧಿಸಲಾಗುವುದು–

ಹೀಗೆಂದು, —**ಶಂಕರ.**"

**ಆಚಾರ್ಯ:** ನಾರಾಯಣ, ನಾರಾಯಣ.

**ಚಿತ್ರಗುಪ್ತ:** ಶ್ರೀಮದಾಚಾರ್ಯ ಪ್ರಭೂಗೆ ಜೈ. (ಸೇವಕನೂ ಜಯಘೋಷಮಾಡುವನು.)

**ಆಚಾರ್ಯ:** (ಗಂಭೀರ ಭಾವದಿಂದ) ತಾಳಿ, ತಾಳಿ. ಏಕಿಷ್ಟು ಜಯಘೋಷ? ಆದದ್ದೇನಾಗಿದೆ ಯೊಚಿಸಿ ನೋಡಿ. ನಿಮ್ಮೆಲ್ಲರಿಷ್ಟದಂತೆ ನನ್ನನ್ನು ದುಡಿಯಲು ನಿಯಮಿಸಿದ್ದಾರಲ್ಲವೆ?

**ಚಿತ್ರಗುಪ್ತ:** ಅಹುದಹುದು. ಅದು ನಮ್ಮ ಪುಣ್ಯ.

**ಆಚಾರ್ಯ:** ಹಾಗಾದರೆ ಈ ದುಡಿಯುವ ಆಳಿಗೇಕೆ ಜಯಘೋಷ? ಆಳನ್ನೊದಗಿಸಿಕೊಟ್ಟ ಆ ಪರಮಾತ್ಮನನ್ನು ಕೊಂಡಾಡಿ.

**ಚಿತ್ರಗುಪ್ತ:** ಎಷ್ಟು ದೊಡ್ಡ ಮನಸ್ಸು ಪ್ರಭುಗಳದು!

**ಆಚಾರ್ಯ:** ಒಳ್ಳೆಯ ಕೆಲಸವಾಯಿತಿದು. ಎಲ್ಲಿಯ ಭೂಲೋಕ, ಎಲ್ಲಿಯ ನಾವು! ಎಲ್ಲಿಯ ಯಮಪಟ್ಟ! ಒಂದಕ್ಕೊಂದು ಸಂಬಂಧವೇ ತೋರದು.

**ಚಿತ್ರಗುಪ್ತ:** ಇದೆಲ್ಲವೂ ನಮ್ಮ ರಾಯರ ಸಂಶೋಧನೆಯ ಫಲವೆಂದು ಊಹಿಸುತ್ತೇನೆ.

**ಆಚಾರ್ಯ:** ನಿಜವಾಗಿಯು. ಯಾರಿಗೆ ಬೇಕಿತ್ತು ಈ ಪದವಿ?

**ಚಿತ್ರಗುಪ್ತ:** 'ಶುಭಸ್ಯ ಶೀಘ್ರಂ' ಎನ್ನುತ್ತಾರೆ. ತಾವೀ ಪತ್ರಕ್ಕೆ ಸಹಿ ಹಾಕಿದರೆ ನಾನು ಕೂಡಲೆ ಡಂಗುರವನ್ನು ಹಾಕಿಸುತ್ತೇನೆ. ಎಲ್ಲರಿಗೂ ಆನಂದವಾರ್ತೆ ಕೂಡಲೆ ತಲ್ಪಲಿ.

**ಆಚಾರ್ಯ:** ಆಗಬಹುದು. (ಸಹಿ ಹಾಕುವನು.)

**ಚಿತ್ರಗುಪ್ತ:** (ಚಾರನನ್ನು ಕುರಿತು) ಎಲೋ ಇದನ್ನು ಕೂಡಲೆ

ಡಂಗುರವಿಕ್ಕಲು ಪುರಪಾಲಕನಿಗೆ ಆಜ್ಞಾಪಿಸಲಾಗಿದೆ ಎಂದು ಹೇಳು.

**ಸೇವಕ:** ಮಹದಪ್ಪಣೆ ಪ್ರಭು. (ಪತ್ರವನ್ನು ತೆಗೆದುಕೊಂಡು ಚಾರನು ತೆರಳುವನು.)

**ಚಿತ್ರಗುಪ್ತ:** ತಾವಿನ್ನು ಇದೇ ಶುಭಮುಹೂರ್ತದಲ್ಲಿ ಪಟ್ಟಾಭಿಷೇಕ ಮಹೋತ್ಸವವನ್ನು ಆಚರಿಸಲು ಅಪ್ಪಣೆ ಕೊಟ್ಟರೆ ನಾಳಿಗೇನೆ ಸಕಲ ಸನ್ನಾಹಗಳನ್ನು ಮಾಡಿಸುತ್ತೇನೆ.

**ಆಚಾರ್ಯ:** ಪಟ್ಟಾಭಿಷೇಕವೆ?

**ಚಿತ್ರಗುಪ್ತ:** ಅಹುದಹುದು. ಅದರಲ್ಲೇನಾಶ್ಚರ್ಯ?

**ಆಚಾರ್ಯ:** ಚಿತ್ರಗುಪ್ತರೆ, ಅದು ಕೇವಲಲೌಕಿಕರಿಗೆ ನಮ್ಮಂಥವರಿಗಲ್ಲ.

**ಚಿತ್ರಗುಪ್ತ:** ಅದು ಸತ್ಯ. ಆದರೆ ನಮ್ಮಗಳ ಪ್ರೀತಿಯ ದೆಶೆಯಿಂದ ಲಾದರೂ ತಾವೊಮ್ಮೆ ಈ ಮಹೋತ್ಸವಕ್ಕೆ ಅನುಮತಿಯನ್ನು ಕೊಡ ಬೇಕೆಂದು ಕೇಳಿಕೊಳ್ಳುತ್ತೇನೆ.

**ಆಚಾರ್ಯ:** ಬೇಡ ಬೇಡ. ಇದೊಂದು ಹಂಗಾಮಿಯ ಕೆಲಸ. ನಾವು ಕೇವಲ ಪ್ರತಿನಿಧಿಗಳು. ಧರ್ಮಪೀಠವನ್ನು ಅಲಂಕರಿಸುವ ಯೋಗ್ಯತೆ ನಮಗೆ ಬೇಡ. ನಿಮ್ಮ ಆಡಳಿತೆಗೆ ಚ್ಯುತಿಯುಂಟಾಗದಂತೆ ನೋಡಿಕೊಳ್ಳಲು ಮಾತ್ರ ನಾವು ಒಪ್ಪುತ್ತೇವೆ.

**ಚಿತ್ರಗುಪ್ತ:** ಮಹಾನುಭಾವರ ಚಿತ್ತವೃತ್ತಿ ನಮಗೆ ಅರ್ಥವಾಗುವು ದಿಲ್ಲ.

**ಆಚಾರ್ಯ:** ಬೇಡ ಬೇಡ. ಪ್ರಕೃತ ಮಾಡಬೇಕಾದ ಹಲವಾರು ಅಗತ್ಯ ಕಾರ್ಯಗಳಿವೆ. ನಿಮ್ಮ ಹಳೆಯ ಪದ್ಧತಿಯನ್ನು ನೋಡಿ ಈಗಾಗಲೆ ನಮಗೆ ಬೇಜಾರು ಬಂದಿದೆ,

**ಸೇವಕ:** (ಪ್ರವೇಶಿಸಿ) ಜೀಯಾ! ಡಂಗುರವು ಕೂಡಲೆ ಹೊಯ್ಯಲ್ಪಡು ವುದು.

**ಆಚಾರ್ಯ:** ಇನ್ನು ಕಾಲವಿಳಂಬಮಾಡದೆ ನಮ್ಮ ಸೇನಾಪತಿಯನ್ನೂ ಚಂಡ ವಿಕ್ರಮರನ್ನೂ ಬರಮಾಡಿ.

(ಮಂತ್ರಿಯು ಕಣ್ಣುಸನ್ನೆ ಮಾಡುವನು. ಚಾರನು ಕೂಡಲೆ ಅವ

ರನ್ನು ಕರೆತರಲು ಓಡುವನು.)

**ಚಿತ್ರಗುಪ್ತ**: ಅಗತ್ಯವಿದ್ದ ಕೆಲಸಗಳನ್ನು ಈ ದಿನವೇ ಪ್ರಾರಂಭಿಸಿ ಬಿಡಬಹುದು.

**ಆಚಾರ್ಯ**: ಈ ದಿನವೇಕೆ, ಈಗಲೆ. ಮೊದಲನೆಯದಾಗಿ ಶಿಸ್ತು. ಪ್ರತಿಯೊಬ್ಬನೇಳಿಗೆಗೂ ತನ್ಮೂಲಕ ಜಗತ್ತಿನ ಅಭಿವೃದ್ಧಿಗೂ ಶಿಸ್ತು ಅತ್ಯಾವಶ್ಯಕವಾಗಿದೆ. ವ್ಯಕ್ತಿಗಳು ಇಚ್ಛಾವರ್ತಿಗಳಾದರೆ ಅನಾಹುತಗಳು ಪಂಕ್ತಿಗಳಾಗಿ ಹರಿಯುತ್ತವೆ. ಎರಡನೆಯದಾಗಿ ನೌಕರರಿಗೆ ಕೈ ತುಂಬಾ ಕೆಲಸವಾದರೆ ಬೇಜಾರುಗೊಳ್ಳುತ್ತಾರೆ. ಬೇಜಾರು ಹೆಚ್ಚಿದಂತೆ ಸೋಮಾರಿಗಳೂ ಸುಳ್ಳುಗಾರರೂ ಆಗುತ್ತಾರೆ. ಅಲ್ಲಿಂದ ಪರಸ್ಪರ ಚಾಡಿ ಪ್ರಾರಂಭಿಸುತ್ತದೆ. ಚಾಡಿ ಬೆಳದಂತೆ ಮನಸ್ತಾಪ, ದ್ವೇಷ ಬುದ್ಧಿ, ಅಶಾಂತಿ ಮೊದಲಾದವುಗಳು ಒಂದರ ಮೇಲೊಂದು ಪ್ರಾರಂಭಿಸುತ್ತವೆ.

**ಚಿತ್ರಗುಪ್ತ**: ಇವೆಲ್ಲವನ್ನೂ ತಡೆಗಟ್ಟಲು ಶಿಸ್ತನ್ನುಂಟುಮಾಡುವುದು ನಮ್ಮ ಆದ್ಯ ಕರ್ತವ್ಯ.

**ಆಚಾರ್ಯ**: ಆದ್ದರಿಂದ ಆದಷ್ಟು ಕೆಲಸವನ್ನು ಕಡಮೆಮಾಡಿ, ವಿರಾಮ ವಿಶ್ರಾಂತಿಗಳನ್ನು ಹೆಚ್ಚಿಸಿ, ಮಾಡುವ ಕೆಲಸದಲ್ಲಿ ಆಸಕ್ತಿಯುಂಟಾಗುವಂತೆ ಮಾಡಬೇಕು.

**ಸೇನಾಪತಿ**: (ಪ್ರವೇಶಿಸಿ) ಶ್ರೀಮನ್ಮಹಾರಾಜರವರ ಅಡಿದಾವರೆಗಳಿಗೆ ಈ ಸೇನಾಪತಿಯ ಅನಂತಾನಂತ ವಂದನೆಗಳು.

**ಆಚಾರ್ಯ**: ಸೇನಾಪತಿಗಳಿಗೆ ಶುಭವಾಗಲಿ. ಹೀಗೆ ಬನ್ನಿ.

**ಸೇನಾಪತಿ**: ಪ್ರಭುಗಳಿಗೆ ಹೃತ್ಪೂರ್ವಕ ಅಭಿನಂದನೆಗಳು. ಈಗ ತಾನೇ ರಾಜಮಾರ್ಗದಲ್ಲಿ ಬರುತ್ತಿರಲು ಕಂಚುಕಿಯು ಡಂಗುರವಿಕ್ಕುತಿದ್ದು ದನ್ನು ಕೇಳಿ ಮಹದಾನಂದವಾಯಿತು.

**ಆಚಾರ್ಯ**: ಸಂತೋಷ.

**ಸೇನಾಪತಿ**: ಪ್ರಜೆಗಳು ಕಿಕ್ಕಿರಿದು ನಿಂತು, ಕಿವಿದೆರೆದು ಮೇಲಿಂದ ಮೇಲೆ ಕೇಳುತ್ತಲಿದ್ದರು. ಏನೆಂದು ವರ್ಣಿಸಲಿ ಅವರಾನಂದವನ್ನು!

**ಚಿತ್ರಗುಪ್ತ**: ಯಾರಿಗೆ ತಾನೆ ಸಂತೋಷವಾಗಲಿಕ್ಕಿಲ್ಲ?

**ಚಂಡ,ವಿಕ್ರಮು:** (ಪ್ರವೇಶಿಸಿ) ಪ್ರಭುಗಳ ಪಾದಾರವಿಂದಗಳಿಗೆ ಈ ಭೃತ್ಯರು ಮಣಿಯುತ್ತಾರೆ.

**ಆಚಾರ್ಯ:** (ನಸುನಕ್ಕು) ಬನ್ನಿ ಬನ್ನಿ ಚಂಡವಿಕ್ರಮರೆ. (ಚಂಡ ವಿಕ್ರಮರು ದೂರದಲ್ಲಿ ನಿಂತುಕೊಳ್ಳುವರು.) ಚಿತ್ರಗುಪ್ತರೆ! ಇನ್ನು ನಮ್ಮ ಕೆಲಸವನ್ನು ಪ್ರಾರಂಭಿಸುವ. ತಮಗೆ ವರ್ಷದಲ್ಲಿ ಎಷ್ಟು ರಜಾ ದಿನಗಳು? ಉಳಿದ ನೌಕರರಿಗೆ ಎಷ್ಟು ದಿನ ರಜೆ?

**ಚಿತ್ರಗುಪ್ತ:** ಪ್ರಭುಗಳು ಮನ್ನಿಸಬೇಕು. ನಮ್ಮಲ್ಲಿ ರಜದ ಮಾತೇ ಇಲ್ಲ.

**ಆಚಾರ್ಯ:** ಆದ್ದರಿಂದಲೇ ನೌಕರರಿಗೆ ತಮ್ಮ ಕೆಲಸದಲ್ಲಿ ಆಸಕ್ತಿ ಕಡಮೆ. ಇರಲಿ, ಇನ್ನು ಮೇಲೆ, ಚಿತ್ರಗುಪ್ತರೇ! ಬರೆದು ಕೊಳ್ಳಿ—ಎಲ್ಲ ಅಧಿಕಾರಿಗಳಿಗೂ ವಾರದಲ್ಲಿ ಕೇವಲ ಐದು ದಿನ ಕೆಲಸ, ಉಳಿದೆರಡು ದಿನ ರಜೆ. ದ್ವಾರಪಾಲಕರಿಗೆ ಮಾತ್ರ ಒಂದು ದಿನ ಕೆಲಸ, ಒಂದು ದಿನ ರಜೆ.

**ಚಿತ್ರಗುಪ್ತ:** ಇವನ್ನು ಈ ದಿನದಿಂದಲೇ ಜಾರಿಯಲ್ಲಿ ತರುತ್ತೇನೆ.

**ಆಚಾರ್ಯ:** ಮಹಾದ್ವಾರಗಳು ಸದಾ ಮುಚ್ಚಿರಬೇಕು. ರಾಜಾಜ್ಞೆಯಿಲ್ಲದೆ ಯಾರೂ ನಗರವನ್ನು ಪ್ರವೇಶಿಸಲಾಗದು. ತಿಳಿಯಿತೆ?

**ಸೇನಾಪತಿ:** ಈ ಎಲ್ಲ ಏರ್ಪಾಟನ್ನು ನಾನು ಇಂದೇ ಮಾಡುತ್ತೇನೆ.

**ಆಚಾರ್ಯ:** ಕೆಲ್ಸ ಕಡಮೆಯಾಯಿತೆಂದು ಯಾರೂ ಹಿಗ್ಗಬೇಕಾದುದಿಲ್ಲ. ಮಾಡುವ ಕೆಲಸದಲ್ಲಿ ಎಷ್ಟು ಜಾಗರೂಕರಾಗಿರಬೇಕೆನ್ನುವುದನ್ನು ಯೋಚಿಸಿಕೊಳ್ಳಿ. ಈ ಆಜ್ಞೆಗಳನ್ನು ಉಲ್ಲಂಘಿಸಿದವರು ಕಠಿಣ ಶಿಕ್ಷೆಗೆ ಗುರಿಯಾಗುತ್ತಾರೆ. ಮತ್ತು ನಾವು ಈ ದಿನ ಕೇಳಿದ ಶುಭವಾರ್ತೆಗಾಗಿ ಸಮಸ್ತ ಅಧಿಕಾರಿಗಳಿಗೂ ಒಂದೊಂದು ತಿಂಗಳ ಸಂಬಳವನ್ನು ಉಚಿತವಾಗಿ ಕೊಡಲಾಗುವುದು.

**ವಿಕ್ರಮ:** ಬಡವರ ಭಾಗ್ಯನಿಧಿ.

**ಚಂಡ:** ನಮ್ಮಪ್ಪ ಕಲ್ಪವೃಕ್ಷ.

**ಆಚಾರ್ಯ:** ಸೇನಾಪತಿಗಳೆ! ನೀವಿನ್ನು ಕೂಡಲೆ ಹೋಗಿ ಡಂಗುರವನ್ನು ಹೊಯ್ಸಿರಿ.

**ಸೇನಾಪತಿ:** ಮಹದಪ್ಪಣೆ. (ವಂದಿಸಿ ತೆರಳುವನು.)

**ಆಚಾರ್ಯ:** ಚಂಡ ವಿಕ್ರಮರೆ! ಹೀಗೆ ಬನ್ನಿ. ನಮ್ಮನ್ನು ಎಡೆಬಿಡದೆ ಯೋಗ್ಯ ರೀತಿಯಲ್ಲಿ ಸೇವಿಸಿದರ ಫಲವಾಗಿ ನಿಮ್ಮಿಬ್ಬರನ್ನು ನಮ್ಮ ಪ್ರಧಾನ ಭೃತ್ಯರನ್ನಾಗಿ ಮಾಡಿಕೊಂಡಿದ್ದೇವೆ. ಚಿತ್ರಗುಪ್ತರೆ! ಇದನ್ನೂ ಬರೆದುಕೊಳ್ಳಿ.

(ಚಿತ್ರಗುಪ್ತನು ಬರೆದು ಕೊಳ್ಳುವನು)

**ಚಂಡ, ವಿಕ್ರಮ:** ಉದ್ಧಾರವಾದೆವು ತಂದೆ.

**ಆಚಾರ್ಯ:** ನೀವಿನ್ನು ಹೋಗಬಹುದು.

**ಚಂಡ, ವಿಕ್ರಮ:** ಚಿರಕಾಲ ಬಾಳಲಿ ಮಹಾರಾಜರು. (ವಂದಿಸಿ ತೆರಳುವರು.)

**ಆಚಾರ್ಯ:** ಚಿತ್ರಗುಪ್ತರೆ! ತಮಗಿನ್ನು ವಿಶೇಷ ಹೇಳಬೇಕಾದುದೇನೂ ಇಲ್ಲ. ಶ್ರದ್ಧೆಯಿಂದ ಎಲ್ಲಾ ಮೇಲ್ವಿಚಾರಣೆಯನ್ನು ನೋಡಿಕೊಳ್ಳಿ. ತಮಗೆ ಯಾವ ರೀತಿಯಲ್ಲಿ ಮಾರ್ಪಾಟಾಗಬೇಕೆಂದು ತಿಳಿಯುತ್ತದೋ ಅದನ್ನು ನಮ್ಮಲ್ಲಿ ವಿಜ್ಞಾಪಿಸಿಕೊಳ್ಳಿ. ಕೂಡಲೆ ಸರಿಪಡಿಸುತ್ತೇವೆ. ಪ್ರಜೆಗಳಿಗೆ ಹಿತ ವಾಗುವ ಕಾರ್ಯವಾವುದಿದ್ದರೂ ಅದನ್ನು ಮಾಡಿಸುವ ಭಾರ ನಮ್ಮ ಮೇಲೆ.

**ಚಿತ್ರಗುಪ್ತ:** ಮಹದಾನಂದ ಪ್ರಭು.

**ಆಚಾರ್ಯ:** ಈ ದಿನ ಶ್ರೀಹರಿಯು ನಮಗೊಂದು ಹೊಸ ಕೆಲಸವನ್ನು ಕೊಟ್ಟು ಪರೀಕ್ಷಿಸುತ್ತಲಿದ್ದಾನೆ. ಪರೀಕ್ಷೆ ಕೂಡಲೆ ಮುಗಿಯಲೆಂದು ಕೇಳಿ ಕೊಳ್ಳಲು ಹೊರಡುತ್ತೇವೆ. ತಾವೂ ಹೊರಡಬಹುದು.

**ಚಿತ್ರಗುಪ್ತ:** ತಮ್ಮ ಇಷ್ಟಾರ್ಥ ನೆರವೇರಲೆಂದು ಹಾರೈಸುತ್ತೇನೆ. ನಾನಿನ್ನು ಹೊರಡುತ್ತೇನೆ. (ವಂದಿಸಿ ತೆರಳುವನು.)

**ಆಚಾರ್ಯ:** (ಸೇವಕನನ್ನು ಕುರಿತು) ಎಲೋ, ಸ್ನಾನ ಘಟ್ಟಕ್ಕೆ ಹೊರ ಡುವ ನಡೆ.

**ಸೇವಕ:** ಪ್ರಭುಗಳು ಹೀಗೆ ದಯಮಾಡಿಸಬೇಕು. (ಮುಂದೆ ತೆರಳುವನು.)

**ಆಚಾರ್ಯ:** ಶ್ರೀಹರಿ, ಮುರಾರಿ, ನನ್ನಾಟ ಶಿಖರವನ್ನು ಮುಟ್ಟಿತು. ಯಮನನ್ನು ಈ ರೀತಿಯಲ್ಲಿ ಓಡಿಸಿ ಅವನ ಪಟ್ಟದ ಮೇಲೆ ಕೂಡಬೇಕೆಂದ್ರೇ

ಬ್ರಹ್ಮ ಬರೆದಿದ್ದನೋ ಹೇಗೋ ಈ ಹಣೆಯಲ್ಲಿ! ಎಂಥಾ ಸಾಹಸ! ನೆನಸಿಕೊಂಡರೆ ಭಯವಾಗುತ್ತದೆ. ಇನ್ನು ಮುಂದೆ ಏನಾಗುತ್ತದೆಯೋ ಹೇಗಾಗುತ್ತದೆಯೋ ಆ ಸರ್ವಜ್ಞನಿಗೇ ಗೊತ್ತು. ಅನಾಥ ರಕ್ಷಕ! ಇದು ನನಗೆ ಪರದೇಶ, ನಾನೊಬ್ಬ ಪರದೇಶಿ. ನನಗೆ ತಂದೆ ತಾಯಿ, ಬಂಧು ಬಳಗ ಎಲ್ಲಾ ನೀನೆ. ನನ್ನನ್ನು ಕೈಬಿಡಬೇಡ ತಂದೆ. (ಹಾಡುತ್ತ ತೆರಳುವನು)

[ರಾಜಮಾರ್ಗದ ತೆರೆ ಬೀಳುವುದು.]

---

## ದೃಶ್ಯ ೫

[ಯಮಪುರಿಯ ರಾಜಮಾರ್ಗ. ಚಂಡವಿಕ್ರಮರು ಮೊದಲಿಗಿಂತಲೂ ಒಳ್ಳೆಯ ಉಡುಪನ್ನು ಧರಿಸಿ ಪ್ರವೇಶಿಸುವರು.]

**ಚಂಡ**: ಅಣ್ಣಯ್ಯಾ! ನಿನ್ತಲೆ ಭಲೇ ತಲೆ ಅಣ್ಣ. ಬಹುಮಾನ ಸಿಕ್ಕುತ್ತೆ ಅಂತ ಹೇಳ್ತಾ ಇದ್ದೆ, ನೀನು ಹೇಳ್ದಂತೆ ಆಗ್ಹೋಗಿ ಬಿಟ್ತು ನೋಡು!

**ವಿಕ್ರಮ**: ಆಗ್ದೆ ಏನೋ? ನಮ್ದೇವ್ರ ಸತ್ಯ ನಮ್ಗೆ ಗೊತ್ತಿಲ್ವೆ? ಆತೆಂದು ನಮ್ಮನ್ನ ಹತ್ತಿರ ಕರೆದು, ಒಳ್ಳೇ ಮಾತ್ನಾಡಿ 'ಗೋಪ್ಯದಲ್ಲಿ ಕೆಲ್ಸ ಮಾಡಿ' ಅಂತ ಹೇಳಿದ್ನೋ ನಾನಂದೇ ಖೂಬೀ ಹಿಡಿದೆ.

**ಚಂಡ**: ಅದಿರ್ಲಿ, ಇಲ್ಲಿ ಇನ್ನೊಂದು ವಿಷಯ. ಬಹುಮಾನ ಕೊಡ್ತೇನಂತ ಹೇಳ್ದಾತ, ಯಮಧರ್ಮ, ಎಲ್ಲೋ ಹೋದ. ನಮ್ಮ ಹೊಸ ರಾಯರು ಸತ್ಪಾಗು ಧರ್ಮರಾಯರು ಕಣಯ್ಯ. ಬಹುಮಾನ ಕೊಟ್ಟೇ ಬಿಟ್ರು.

**ವಿಕ್ರಮ**: ಅದು ಹಾಗಿರಲಿ, ಊರಾಗೆಲ್ಲ ನೋಡು, ನಮ್ಗೆ ಎಷ್ಟು ಮರ್ಯಾದೆ! ಇಲ್ಲಿ ಬನ್ನಿ ಅಂತಾರೆ, ಹೀಗೆ ಕೂಡಿ ಅಂತಾರೆ.

**ಚಂಡ**: ಆತ ಹೋದದ್ದು ಜನಕ್ಕೆಷ್ಟು ಸಂತೋಷ ಅಂತೀಯಾ?

**ವಿಕ್ರಮ**: ರಾತ್ರೆಲ್ಲಾ ಪದ ಹಾಡೋರ್‍ಯಾರೊ, ಕುಣಿಯೋರಾರೊ; ಇಷ್ಟಿದ್ರು ಅಪ್ಪಾ ಅವರು ಹೊರಗೇ ಬಂದಿಲ್ಲ. ಮೂಗು ಹಿಡ್ಕೊಂಡು

ಕೊತ್ತಿಬಿಟ್ಟದಾರೆ.

**ಚಂಡ:** ಇವುರೇ ಕೊನೆತನಕ ಬಾಳಲಪ್ಪ.

**ವಿಕ್ರಮ:** ಸಾವಿರೋ ತನಕಾದ್ರು ಇರ್ಲಪ್ಪ.

**ಚಂಡ:** ಅಲ್ಲಣಾ, ನಮ್ಮ ಆತ ಈ ಕೆಲ್ಸಾ ಕಳ್ಕೊಂಬೋ ಅಂಥ ಕೆಲ್ಸ ಏನ್ಮಾಡಿದ?

**ವಿಕ್ರಮ:** ಇದೇ ಇರುತ್ತೆ ಕಣೊ, ನಾವೀಗ ಮಾಡಿದ್ದು. ಸುಮ್ನೆ ಇದ್ದು ಬಿಡು. ಯಾರ್ತಾವಾದ್ರು ಹೇಳ್ಗೀಳಿ. ಒಂದ್ಹೋಗಿ ಒಂದಾದೀತು.

**ಚಂಡ:** ನನಗೇಕೆ ಬೇಕಪ್ಪ ಆ ರಗಳೆ. ಕಡ್ಮೆ ಕೆಲ್ಸ, ಕೈ ತುಂಬಾ ಸಂಬಳ. ಹೊಟ್ತುಂಬಾ ಉಂಡನೇನೊ, ಬೆಚ್ಗೆ ಮಲಗಿದನೇನೊ. (ತೆರೆಯ ಕಡೆ ನೋಡಿ) ಅಲ್ಲಿ ನೋಡು ಹೇಗೆ ಬರ್ತಾ ಇದ್ದಾನೆ!

**ವಿಕ್ರಮ:** (ಹಿಂತಿರುಗಿ ನೋಡಿ) ಹೀಗೆ ದಯಮಾಡಿಸಬೇಕು ದ್ವಾರ ಪಾಲಕ ಮಹಾಪ್ರಭು.

**ದ್ವಾರಪಾಲಕ:** (ಪ್ರವೇಶಿಸಿ) ಏನ್ರಣ್ಣಾ, ನಿಮ್ಮನ್ನೇ ಕಾಣೋಕೆ ಅಂತ ಹೊರಟಿದ್ದೆ—

**ವಿಕ್ರಮ:** ನಮ್ಮನ್ನ?

**ದ್ವಾರಪಾಲಕ:** ಹೌದೌದು, ನಿಮ್ಮನ್ನೆ.

**ಚಂಡ:** ಅದೇನಪ್ಪಾ ಅಂಥ ಕೆಲ್ಸ ನಮ್ತಾವ?

**ದ್ವಾರಪಾಲಕ:** ನಿಮ್ಗೆಲ್ಲಾ ದೊಡ್ಡ ಕೆಲ್ಸ ಸಿಕ್ಕಿದ್ದಕ್ಕೆ ನಮ್ಗೆ ಹೆಮ್ಮೆ. ತಮ್ಮನ್ನ ಕಂಡು ಒಂದು ಸಲಾಮು ಕೊಟ್ಟು ಹೋಗೋಣ ಅಂತ.

**ವಿಕ್ರಮ:** ನಾವೂ ನಿಮ್ಮನ್ನೇ ಕಾಯ್ತಿದ್ವು.

**ದ್ವಾರಪಾಲಕ:** ನಮ್ಮನ್ನ! ಅದೇಕ್ರಯ್ಯ?

**ವಿಕ್ರಮ:** ಧರ್ಮದ ನಶ್ಯಾ ಕೇಳ್ಳೋಕೆ.

**ದ್ವಾರಪಾಲಕ:** ಅಯ್ಯೋ ಅಯ್ಯೋ, ಅದಕ್ಕೇನಂತೆ, ತಗೊಳ್ಳಿ, ಏರ್ಸಿ. (ವಿಕ್ರಮ ನಶ್ಯಾ ತೆಗೆದುಕೊಳ್ಳುವನು.)

**ಚಂಡ:** ಅಡ್ಕೀ ಎಲೇ ಇದೆ ಏನಣ್ಣಾ?

**ದ್ವಾರಪಾಲಕ:** ತಗೋಳಪ್ಪ, ಹಾಕ್ಕೋ. (ಚಂಡನು ಅಡಿಕೆ ಎಲೆ

ತೆಗೆದುಕೊಳ್ಳುವನು.)

**ವಿಕ್ರಮ**: ಭಲಾ! ಹೊಸಾಪುಡಿ, ಬಲ್ಮಜಾ.

**ಚಂಡ**: ಈ ಎಲೆ ನೋಡಣ್ಣ, ಬಲು ಹಸನಾಗಿವೆ. ತಗ್ಗೋ ಹಾಕ್ಕೋ (ವಿಕ್ರಮನೂ ಎಲೆ ಅಡಿಕೆ ತೆಗೆದುಕೊಳ್ಳುವನು.) ನಿನಗೇನು ರಜಾದಿನವೇ ನಣ್ಣಾ ಈ ದಿನಾ?

**ದ್ವಾರಪಾಲಕ**: ಕೊಡ್ಸಿ ಬಿಟ್ಟೇರಾ. ಒಂದು ದಿನ ಕೆಲಸ, ಒಂದು ದಿನ ರಜಾ. ಹೀಂಗೆ ಮಜಾ ಮಾಡ್ತಾ ತಿರುಗೋಕೆ ಪಾಡಾಯ್ತು. ಕೆಲ್ಸಾ ಇದ್ರೂ ಏನಂತೆ–ಬಾಗಿಲಿಗೆ ಬೀಗ ಹಾಕಿ ಕೂತರೆ ಆಯ್ತು.

**ಚಂಡ**: ಒಳಗ್ಹೋಗ್ಲಿಕ್ಕೆ ಪರವಾನ್ಗೆ ಚೀಟಿ ಕೇಳಿದ್ರೆ ಮುಗೀತು.

**ವಿಕ್ರಮ**: ಬಂದ ಮಗ ಮುಂಗನ್ಹಾಂಗೆ ಹಿಂದಕ್ಕೆ ಹೋಗ್ತಾನೆ.

**ದ್ವಾರಪಾಲಕ**: ಎಷ್ಟೆಲ್ಲಾ ಉಪಕಾರ ಮಾಡಿಕೊಟ್ರೆ ನೀವಿಬ್ರು!

**ವಿಕ್ರಮ**: ಎಲೋ ಮುಚ್ಕೋ ಬಾಯಿ. ಉಪ್ಕಾರ ಮಾಡ್ದೋರು ನಾವಲ್ಲ ಕಣೊ, ಹೊಸ ರಾಯರು.

**ದ್ವಾರಪಾಲಕ**: ಹೌದು, ಅವರನ್ನು ತಂದೋರು ನೀವೇ ಅಂತೇ.

**ವಿಕ್ರಮ**: ಛೀ, ಹೀಂಗೆ ಹೇಳಿಯಾ ಎಲ್ಲಾದ್ರು. ನಮ್ಗೊಂದು ಗೊತ್ತಿಲ್ಲ.

**ದ್ವಾರಪಾಲಕ**: ಯಾರೇ ಕರಸ್ಲಿ, ಯಾರೇ ತರಸ್ಲಿ, ನಮ್ಗೆಲ್ಲಾ ಒಳ್ಳೇದು ಮಾಡಿದ್ದಾರೆ ಅಷ್ಟೇ ಸಾಕು.

**ವಿಕ್ರಮ**: ಎಲೋ ಅವರು ಮಾಡೋದು ಹಾಂಗಿರಲಿ, ನೀನು ಮಾಡೋದು ಜ್ಞಾಪಕವಿರಲಿ ಮೊದಲು. ಆವರೂ ಇವರೂ ಬಂದ್ರೆ ಬಿಟ್ಗಟ್ಟೀ.

**ದ್ವಾರಪಾಲಕ**: ದೇವರಾಣೆ ಬಿಡ್ಲಿಕ್ಕಿಲ್ಲ. ಅಂಥದೆಲ್ಲಾ ಮಾಡಿ ನಾನೂ ಕೆಲ್ಸ ಕಳಕೊಳ್ಳೋದಿಲ್ಲ, ಮಹರಾಯಾ.

**ಚಂಡ**: ಅಷ್ಟು ಹುಷಾರಿ ಇದ್ದರೆ ಸಾಕು.

**ದ್ವಾರಪಾಲಕ**: ನಿನ್ನೆ ನಮ್ಮನ್ನೆಲ್ಲಾ ಕರ್ಸಿ ಚನ್ನಾಗಿ ಹೇಳಿದಾರೆ. 'ಯಮಧರ್ಮ ಬಂದರು ಬಿಡ್ಬೇಡಿ, ಈಶ್ವರಪ್ಪಾ ಬಂದ್ರೂನು ಪರವಾನ್ಗೆ

ಚೀಟಿ ಕೇಳಿ; ಚೀಟಿ ಇಲ್ದವರನ್ನು ಒಳಗೆ ಬಿಟ್ರೆ ನಿಮ್ಗತಿ........

**ವಿಕ್ರಮ**: 'ಗಂಗಮ್ಮನ್ನ ಕೂಡ್ತು,' ಅಂತ ಅಲ್ಲೇನೊ ?

**ದ್ವಾರಪಾಲಕ**: ಹೌದಣ್ಣ.

**ವಿಕ್ರಮ**: ನಡೀರಪ್ಪ, ಆ ಮರದ ಕೆಳಗೆ ಹೋಗಿ ಕೂತ್ಕೊಂಡು ಹೊಗೆ ಬತ್ತೀನಾದ್ರು ಸೇದೋಣ.

**ಚಂಡ**: ನನ್ತಾವ ಹೊಗೆಸೊಪ್ಪು ಒಳ್ಳೇದಿದೆ, ಹೊಸಾಹೊಸದು.

**ದ್ವಾರಪಾಲಕ**: ಮತ್ತಿನ್ನೇನಂತೆ. ಪಾಡಾಗ್ಬಿಟ್ತು-ನಡೀಯಣ್ಣ.

**ವಿಕ್ರಮ**: ಎಲ್ಲಲೋ ಎಂಥಾದ್ದು ತಂದೀದಿ ನೋಡೋಣ?

(ಚಂಡನು ನಗುತ್ತ ಗಾಂಜಿಯನ್ನು ಕೊಡುವನು)

**ಚಂಡ**: ಬೈ ಬೇಡಪೋ, ಯಾವಾಗ್ಲಾದ್ರು ಸೇತ್ತೇನೆ.

**ವಿಕ್ರಮ**: ಗಾಂಜೀ! ಭಲೇ, ನೀನೇ ಎಲ್ಲರಿಗೂ ದೊರೆಯಾಗಿರುವಾಗ ನಿನ್ನಾ್ಯರು ಬೈಬೇಕು? ಎಲೋ! ಗಾಂಜಿ ನೋಡಿ ಒಂದು ಪದ ಜ್ಞಾಪಕಕ್ಕೆ ಬಂತು, ಹಾಡಿ ಬಿಡ್ತೇನೆ. ಅಲ್ಲಿಂದ ಮುಂದಿನ ಮಾತು.

**ಚಂಡ**: ಹಾಡಣ್ಣ, ಕೇಳೋಣ.

(ವಿಕ್ರಮನು ಹಾಡನ್ನು ಪ್ರಾರಂಭಿಸುವನು. ಮೂವರೂ ಸೇರಿ ಹಾಡುಹಾಡಿ ಮುಗಿಸುವರು.)

**ದ್ವಾರಪಾಲಕ**: ಬನ್ನಿ ಬನ್ನಿ ಹೋಗೋಣ.(ಮೂವರೂ ತೆರಳುವರು.)

---

## ದೃಶ್ಯ ೬

[ಯಮಪುರಿಯ ಮಹಾದ್ವಾರ. ದ್ವಾರಪಾಲಕನು ಪಹರಾ ತಿರುಗುತ್ತಲಿರುವನು. ಯಮಧರ್ಮನು ಪ್ರವೇಶಿಸುವನು.]

**ಯಮ**: (ಖಿನ್ನ ವದನನಾಗಿ) ಏನಿದು ವಿಚಿತ್ರವಾಗಿದೆ! ಎಂದೂ ಇಲ್ಲದ ಈ ಎಡಗಣ್ಣ ಹಾರುವಿಕೆಯಾದರೇಕೆ? ಶಿವನಲ್ಲಿ ಆದ ಮಾನಭಂಗವು

ಸಾಲದೆ? ಅಥವಾ ನಗರದಲ್ಲಿ ಏನಾದರು ಅವಿಚಾರವಾಗಿರಬಹುದೆ? ಇರಲಾರದು ಕಾರ್ಯದಕ್ಷರಾದ ಮಂತ್ರಿಗಳೂ ಅನುಭವಶಾಲಿಗಳಾದ ನೌಕರರೂ ಇರುವಾಗ ತೊಂದರೆಯಿರದು. (ಸ್ವಲ್ಪ ಯೋಚಿಸಿ) ನಾನಿನ್ನು ಕೂಡಲೆ ಭೂಭಾರವು ಕಡಮೆಯಾಗಲು ಅಗತ್ಯವಾದ ಕಾರ್ಯಗಳನ್ನೆಲ್ಲ ಕೈಕೊಂಡು ಶಂಕರನು ಮೆಚ್ಚುವಂಥ ಕೆಲಸ ಮಾಡಿಸುತ್ತೇನೆ. (ಮಹಾದ್ವಾರದ ಕಡೆ ನೋಡಿ) ಭೇಷ್. ನಾನೂರಿನಲ್ಲಿಲ್ಲದ ಸಮಯದಲ್ಲಿ ಯಾರೂ ಪ್ರವೇಶಿಸ ಕೂಡದೆಂದು ಬೀಗವನ್ನು ಹಾಕಿ ಕಾದಿದ್ದಾನೆ. (ದ್ವಾರಪಾಲಕನ ಬಳಿಗೆ ಬಂದು) ಎಲೈ ನಿನ್ನ ಕಾರ್ಯದಕ್ಷತೆಗೆ ಮೆಚ್ಚಿದ್ದೇನೆ. ಇನ್ನು ಮುಂದೆಯೂ ಹೀಗೇ ಕೆಲಸಮಾಡುತ್ತಲಿರು.

**ದ್ವಾರಪಾಲಕ**: (ವಂದಿಸಿ) ಆಳ್ವರಸರ ಆಜ್ಞೆಯನ್ನು ಮೀರಿ ಅಡಿಯಿಡಲಾರೆನು.

**ಯಮ**: ಭೇಷ್. ಬಾಗಿಲು ತೆರೆ.

**ದ್ವಾರಪಾಲಕ**: ಬಾಗಿಲು ತೆರೆಯಕೂಡದೆಂದು ಸೇನಾಪತಿಗಳಾಜ್ಞೆಯಾಗಿದೆ.

**ಯಮ**: ಭೇಷ್. ಸೇನಾಪತಿಗಳ ಆಜ್ಞೆ ಸಾಮಾನ್ಯರಿಗೆ. ಆಳ್ವ ಅರಸರಿಗಲ್ಲ.

**ದ್ವಾರಪಾಲಕ**: ಸತ್ಯವಾಗಿಯೂ ಆಳ್ವ ಅರಸರಿಗಲ್ಲ. ಉಳಿದವರೆಲ್ಲರಿಗೂ.

**ಯಮ**: ಹಾಗೆನ್ನು. ಸರಿ, ಬಾಗಿಲು ತೆರೆ.

**ದ್ವಾರಪಾಲಕ**: ತೆರೆಯಲಾಗದೆಂದು ಅರಿಕೆಮಾಡಿಕೊಂಡೆನಲ್ಲವೆ?

**ಯಮ**: ಮೂರ್ಖ! ಪಿತ್ತವೇರಿದೆಯೆ?

**ದ್ವಾರಪಾಲಕ**: ದೊಡ್ಡವರು ಕ್ಷಮಿಸಬೇಕು. ಒಳಗೆ ಹೋಗಲು ತಮ್ಮಲ್ಲಿ ಪರವಾನಿಗೆ ಚೀಟಿಯುಂಟೆ?

**ಯಮ**: ಹುಚ್ಚಾ, ಪಿತ್ತವು ಚನ್ನಾಗಿ ಏರಿದಂತಿದೆ ನಿನ್ನ ತಲೆಗೆ.

**ದ್ವಾರಪಾಲಕ**: ಜೀಯಾ ನಾನು ಬಿಸಿಲಿನಲ್ಲಿ ಸುತ್ತಾಡಿ ಬಂದಿಲ್ಲ.

**ಯಮ**: ಮದಾಂಧ, ಯಾರೊಡನೆ ಮಾತನಾಡುತ್ತಲಿರುವೆ ಗೊತ್ತೇ?

**ದ್ವಾರಪಾಲಕ:** ಕೋಪಿಸಿಕೊಳ್ಳಬೇಡಿ. ಈ ಮೊದಲು ತಮ್ಮ ಅಪ್ಪಣೆಯನ್ನು ಪಾಲಿಸುತ್ತಲಿದ್ದಂತೆ ಈ ದಿನ ಇಂದಿನ ಮಹರಾಜರ ಆಜ್ಞೆಯನ್ನು ಪಾಲಿಸುತ್ತಲಿರುವೆ.

**ಯಮ:** ಯಾವನವ ನಿನ್ನ ಹೊಸ ಮಹರಾಜ, ಮೂರ್ಖ ಶಿಖಾಮಣಿ.

**ದ್ವಾರಪಾಲಕ:** ಶ್ರೀಮದಾಚಾರ್ಯರವರು, ನಮ್ಮಲ್ಲಿಗೆ ಭೂಲೋಕದಿಂದ ಬಂದವರು.

**ಯಮ:** (ಬೆಚ್ಚಿ ಬಿದ್ದು) ಏನೆಂದೆ ?

**ದ್ವಾರಪಾಲಕ:** ಶ್ರೀಮದಾಚಾರ್ಯರು ಎಂದೆ.

**ಯಮ:** ಅವನಿಗಾರೀ ಅಧಿಕಾರವನ್ನು ಕೊಟ್ಟದ್ದು?

**ದ್ವಾರಪಾಲಕ:** ಪ್ರಭು ಶಂಕರ.

**ಯಮ:** (ನಡುಗಿ) ಏನೆಂದೆ? ಶಂಕರನೆ!....ಆಚಾರ್ಯನಿಗೆ....!

**ದ್ವಾರಪಾಲಕ:** ಅಹುದಹುದು. ನಿಸ್ಸಂದೇಹವಾಗಿ.

**ಯಮ:** (ನಿಟ್ಟುಸಿರನ್ನು ಬಿಟ್ಟು- ಸ್ವಗತ) ಮೋಸವಾಯ್ತು, ಅನ್ಯಾಯವಾಯ್ತು, ಅಪರಾಧವಾಯ್ತು, ಎಡವಿಬಿದ್ದೆ. ಇದೆಲ್ಲವೂ ನನ್ನ ಮಾಟವೆ. ಮಾಡಬಾರದ ಕೆಲಸಕ್ಕೆ ಕೈ ಹಾಕಿದೆ. ಶಂಕರನ ಕೋಪಕ್ಕೆ ತುತ್ತಾದೆ. (ಸ್ವಲ್ಪ ಯೋಚಿಸಿ) ಏನು ಮಾಡಲಿ? ಒಳನುಗ್ಗಲೆ, ಆಚಾರ್ಯನನ್ನು ಸೀಳಿಬಿಡಲೆ– ಸುಮ್ಮನಿರಲೆ– ಅಪಮಾನ. (ಯೋಚಿಸಿ) ಒಮ್ಮೆ ಬೆದರಿಸಿ ನೋಡುತ್ತೇನೆ. (ಸೇವಕನನ್ನು ಕುರಿತು) ಎಲೋ! ಕೂಡಲೆ ಬಾಗಿಲನ್ನು ತೆರೆ, ಇಲ್ಲವಾದರೆ ಈ ಗದೆಯ ಒಂದೇ ಪ್ರಹಾರಕ್ಕೆ ಮಣ್ಣುಪಾಲಾಗುವಿ.

**ದ್ವಾರಪಾಲಕ:** ಸ್ವಾಮಿ! ತಾವು ಬಲ್ಲವರು. ಏನಾದರೂ ಮಾಡಿ. ಪ್ರಭುವಾಜ್ಞೆ ಮೀರಿ ನಾನು ವರ್ತಿಸಲಾರೆ.

**ಯಮ:** ಹೂಂ, ಹೆಚ್ಚು ಮಾತನಾಡಿದರೆ–

**ದ್ವಾರಪಾಲಕ:** ಹೆಚ್ಚು ಮಾತನಾಡಿದರೆ ನನ್ನ ತಲೆ ಹೋಗುತ್ತದೆಂದು ಬಲ್ಲೆ, ಆದರೆ ತಾವು ಮುಂದುವರಿದರೆ ಶಂಕರನ ಹಣೆಗಣ್ಣಿನುರಿಗೆ....

**ಯಮ:** ಮುಚ್ಚೋ ಬಾಯ್.

**ದ್ವಾರಪಾಲಕ:** ತಮ್ಮ ಹಿತಕ್ಕಾಗಿಯೇ ಹೇಳಿದೆ. ತಪ್ಪಿದ್ದರೆ ಮನ್ನಿಸಿ

ಬಿಡಿ. ಅಲ್ಪರ ಮೇಲೆ ಮಾತ್ರ ಕೈಮಾಡಬೇಡಿ. ತಮ್ಮಧಿಕಾರದಲ್ಲಿ ನಾನೆಂದೂ ಹದ್ದು ಮೀರಿದವನಲ್ಲ.

**ಯಮ:** ಬಲ್ಲೆ ಬಲ್ಲೆ.

**ದ್ವಾರಪಾಲಕ:** ಅಲ್ಲದೆ ತಾವು ಒಳನುಗ್ಗಿದರೂ ತಮ್ಮಲ್ಲಿ ಕನಿಕರವಿರುವ ಜನರಾರೂ ಇಲ್ಲವೆಂದು ಭಾವಿಸುತ್ತೇನೆ.

**ಯಮ:** ಇಲ್ಲವೆ?

**ದ್ವಾರಪಾಲಕ:** ಮಂತ್ರಿಮಂಡಲವೂ ಸೇನಾಪತಿಗಳೂ ಪ್ರಜೆಗಳೂ ಎಲ್ಲರೂ ತಮಗೆ ವಿರುದ್ಧ.

**ಯಮ:** ಎಲ್ಲರೂ ವಿರೋಧಿಗಳೆ?

**ದ್ವಾರಪಾಲಕ:** ಪ್ರಭು ಶಂಕರನಾಜ್ಞೆಯಾದ ಮೇಲೆ ಯಾರು ತಾನೆ ಮೀರಿ ನಡೆಯಬಲ್ಲರು?

**ಯಮ:** (ತಲೆ ತಗ್ಗಿಸಿ ಸ್ವಗತ) ಎಂಥಾ ತಪ್ಪನ್ನೆಸಗಿದೆ. ಏಕೆ ಬೇಕಿತ್ತು ಈ ಕ್ಷುದ್ರ ಕೆಲಸ? ನನ್ನ ಮೇಲೆ ಕರುಣೆಯನ್ನಿಟ್ಟು ಇದೊಂದು ಪಟ್ಟವನ್ನು ಕೊಟ್ಟಿದ್ದರು. ನನ್ನ ಮೂರ್ಖತನ ನನಗೆ ತಿಳಿಯಲಿಲ್ಲ. ಶಿವಾ! ನಿನ್ನಾಜ್ಞೆಯನ್ನುಲ್ಲಂಘಿಸಿದೆ ದೇವಾ. ಯಾರು ನಿನ್ನಲ್ಲಿ ಈ ಎಲ್ಲ ವಾರ್ತೆಯನ್ನರುಹಿದರೊ! ಸರ್ವಜ್ಞಮೂರ್ತಿಯಾದ ನಿನಗೆ ಇತರರು ತಿಳಿಸಬೇಕೆ? ಇದೆಲ್ಲಕ್ಕೂ ನಾನೇ ಕರ್ತೃವು. ಎಂಥಾ ಹೀನ ಸ್ಥಿತಿಗಿಳಿದೆನು! ಯಾವುದನ್ನು ಕುರಿತು ಚಿಂತಿಸಲಿ? ರಾಜ್ಯವೇ, ಪದವಿಯೇ, ದರ್ಪವೇ, ಮಾನಮರ್‍ಯಾದೆಗಳೇ, ಒಂದನ್ನೂ ಯೋಚಿಸುವಂತಿಲ್ಲ. ಯಾರಲ್ಲಿ ಮೊರೆಯಿಡಲಿ? ಈಗಿಲ್ಲಿ ನಿಲ್ಲಲೂ ಬಾರದಂತಿದೆ. ಇತರರು ನೋಡಿದರೆ ಪರಿಹಾಸ್ಯ ಮಾಡಬಹುದು. ಎಂಥಾ ಹಾಳು ಸಮಯದಲ್ಲಿ ಸಂಶೋಧನೆಯನ್ನು ಕೈಕೊಂಡೆನೊ? ಎಂಥಾ ಹುಚ್ಚೋ, ದೇವನೊಬ್ಬನೇ ಬಲ್ಲ. ಈ ಅಲ್ಪನನ್ನು ಇದಕ್ಕಾಗಿ ಬರಮಾಡಿಕೊಂಡನೇ? ಪಾಪ, ಅವನದೇನು ತಪ್ಪು? ಪ್ರಭುವಿಚ್ಛೆಯಿಲ್ಲದೆ ಒಂದು ತೃಣವೂ ಅಲುಗಾಡದು. ಆತನ ಹೊರತು ಅನ್ಯರಲ್ಲಿ ಮೊರೆಯಿಟ್ಟರೇನು ಫಲ? ಪ್ರಭೂ ಶಂಕರಾ! ಕೃಪೆದೋರು, ಕಾಪಾಡು. (ಹಾಡುತ್ತ ತೆರಳುವನು.) [ಅಂಕ ಪರದೆ ಬೀಳುವುದು.]

# ಮೂರನೆಯ ಅಂಕ

## ದೃಶ್ಯ ೧

[ಕೈಲಾಸ. ಪಾರ್ವತೀ ಪರಮೇಶ್ವರರಿಬ್ಬರೇ ಮಾತನಾಡುತ್ತಲಿರುವರು.]

**ಪಾರ್ವತಿ:** ನಾಥಾ! ಏನಂಥಾ ದೀರ್ಘಾಲೋಚನೆ?

**ಶಂಕರ:** ಪಾರ್ವತೀ! ಮಾತನಾಡಿಸಿದೆಯಾ?

**ಪಾರ್ವತಿ:** ವಿಚಿತ್ರವಾಯಿತು. ನನ್ನ ಮಾತುಗಳೇ ತಮ್ಮ ಶ್ರೋತ್ರೇಂದ್ರಿಯವನ್ನು ಮುಟ್ಟಿದಂತಿಲ್ಲ.

**ಶಂಕರ:** ಸತ್ಯವಾಗಿಯೂ ಇಲ್ಲ. ಯಾವ ವಿಷಯವನ್ನು ಕುರಿತು ಕೇಳಿದೆ?

**ಪಾರ್ವತಿ:** ಯಾವುದೇ ವಿಷಯವಾಗಿರಲಿ ಅದು ಈಗ ಬೇಡ. ತಮ್ಮನ್ನು ಈ ರೀತಿಯಲ್ಲಿ ಮೈಮರೆಯುವಂತೆ ಮಾಡಿದ ಅಗಾಧ ವಿಷಯವಾದರೂ ಯಾವುದು?

**ಶಂಕರ:** ಅದು ಕೇವಲ ಮನೋವೇದನೆಯನ್ನುಂಟುಮಾಡುವ ವಿಚಾರ ಪಾರ್ವತಿ.

**ಪಾರ್ವತಿ:** ಶಂಭೋ! ಅಂಥಾ ಮನೋವೇದನೆಯನ್ನುಂಟುಮಾಡುವ ಪರಿಸ್ಥಿತಿಯಾದರೂ ಯಾವುದು? ಅಂಥಾ ಪರಿಸ್ಥಿತಿಯನ್ನು ನಿವಾರಿಸಲು ಸಾಧ್ಯವಿದ್ದರೆ ನಾನೂ ನೆರವಾಗುತ್ತೇನೆ. ದಯವಿಟ್ಟು ಹೇಳಿ.

**ಶಂಕರ:** ದೇವೀ, ಇದು ಭೂಲೋಕಕ್ಕೆ ಸಂಬಂಧಿಸಿದ ವಿಷಯ. ಕೆಲವೊಂದು ರಾಕ್ಷಸ ಶಕ್ತಿಗಳ ಪ್ರಭಾವವು ಹೆಚ್ಚಿ ಸತ್ಯ ಧರ್ಮಗಳಿಗೆ ಚ್ಯುತಿ ಬಂದಿದೆ. ಅನ್ನನೀರುಗಳ ಅಭಾವದಿಂದ ಎಷ್ಟೋ ಜನರು ಕೂಗಿಡುತ್ತಲಿದ್ದಾರೆ. ಭಕ್ತ ವೃಂದವು ತೊಂದರೆಗೀಡಾಗಿದೆ.

**ಪಾರ್ವತಿ:** ಎಂಥಾ ಘೋರ ಪರಿಸ್ಥಿತಿ ಬಂದೊದಗಿದೆ!

**ಶಂಕರ:** ಆದ್ದರಿಂದಲೇ ವಿಚಾರಮಗ್ನನಾಗಿದ್ದೆ. ನಿವಾರಣೋಪಾಯವನ್ನು ಕುರಿತು ಚಿಂತಿಸುತ್ತಲಿದ್ದೆ.

**ಪಾರ್ವತಿ.** ಈ ರೀತಿಯಲ್ಲಿ ಕುಳಿತುಕೊಂಡರಾಗದ ಮಾತು: ಪ್ರತ್ಯಕ್ಷವಾಗಿ ಹೋಗಿ ದುಷ್ಟರನ್ನು ನಿಗ್ರಹಿಸಿ ಶಿಷ್ಟರನ್ನು ಪರಿಪಾಲಿಸಿ ಬರಬೇಕು. ಅಗತ್ಯವಿದ್ದರೆ ಹರಿಯ ನೆರವನ್ನು ತೆಗೆದುಕೊಳ್ಳಬಹುದು ಅಲ್ಲವೆ?

**ಶಂಕರ:** ಆತನಾವಾಗಲೂ ಸನ್ನದ್ಧನು. ಲೋಕ ಕಲ್ಯಾಣ ಕಾರ್ಯಗಳಲ್ಲಿ ತ್ರಿಮೂರ್ತಿಗಳಿಗೆ ಸಮಭಾಗವಿದೆ. ನಮ್ಮಲ್ಲಿ ಭೇದ ಭಾವನೆಯೇ ಇಲ್ಲ. (ಯಮನು ದೂರದಲ್ಲಿ ರೋದಿಸುತ್ತ ಬರುತ್ತಿರುವನು.)

**ಪಾರ್ವತಿ:** (ಕಿವಿಗೊಟ್ಟು ರೋದನವನ್ನು ಕೇಳಿ) ಶಂಕರಾ! ಯಾರೋ ಆರ್ತನಾದ ಮಾಡುವಂತಿದೆ. ಯಾರಾಗಿರಬಹುದು? ನೋಡಿ ಬರೋಣವೆ?

**ಶಂಕರ:** (ಆರ್ತನಾದವನ್ನು ಕೇಳಿ) ಸರಿ, ಇವನೊಬ್ಬ ಹುಚ್ಚ; ಯಮಧರ್ಮ. ನಮ್ಮಲ್ಲಿಗೇ ಬರುತ್ತಲಿರುವನು. ಬರಲಿ. ಇಲ್ಲಿಯೇ ವಿಚಾರಿಸೋಣ

**ಯಮ:** (ಪ್ರವೇಶಿಸಿ) ಅನಾಥ ಬಾಂಧವಾ, ಕರುಣಾಕರಾ! ತಾಯೇ! ಸರ್ವಮಂಗಳೇ, ಮರೆಹೊಕ್ಕೆ ಕಾವುದು. (ನಮಸ್ಕರಿಸುವನು.)

**ಪಾರ್ವತಿ:** ಕಂದಾ! ಯಮಧರ್ಮಾ? ಮಂಗಳವಾಗಲಿ ಮೇಲಕ್ಕೇಳು.

**ಶಂಕರ:** ಏನಿದು ಯಮಧರ್ಮಾ? ಏತಕ್ಕೀ ರೋದನ?

**ಯಮ:** ದೇವಾ, ಆಮೂಲಾಗ್ರವಾಗಿ ನನ್ನ ಚರಿತ್ರೆಯನ್ನು ಬಲ್ಲ ನೀನು ಇದೊಂದು ಬಾರಿ ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತಲಿದ್ದೇನೆ.

**ಶಂಕರ:** ನಿನ್ನ ಚರಿತ್ರೆಯೆಲ್ಲವೂ ತಿಳಿದಿದೆ. ಆದ್ದರಿಂದಲೇ ಇನ್ನು ಮುಂದಾದರೂ ಯೋಗ್ಯ ರೀತಿಯಲ್ಲಿ ರಾಜ್ಯವನ್ನಾಳಿಕೊಂಡಿರೆಂದು ಸಲಹೆ ಕೊಟ್ಟು ಕಳುಹಿದೆನಲ್ಲವೆ?

**ಯಮ:** ಸರ್ವಜ್ಞಾ! ನನ್ನಪರಾಧವನ್ನು ಮನ್ನಿಸಿ, ರಾಜ್ಯವನ್ನು ಕೊಡಿಸಿದರೆ...............

**ಶಂಕರ:** ಏಕೆ? ಇರುವ ರಾಜ್ಯವೊಂದು ಸಾಲದೆ? ಹೊಸ ರಾಜ್ಯದ

ಮೋಹವೇಕೆ?

**ಯಮ**: ತಂದೇ! ಹೊಸ ರಾಜ್ಯವು ಬೇಡ. ಹಳೆಯ ರಾಜ್ಯವೇ ಆಗ ಬಹುದು.

**ಶಂಕರ**: ಹುಚ್ಚಾ, ಬುದ್ಧಿ ಭ್ರಮಿಸಿದಂತಿದೆ ನಿನಗೆ. ಪಾರ್ವತೀ! ಇವನ ಮಾತುಗಳೇ ಅರ್ಥವಾಗಲೊಲ್ಲವು ನೋಡು.

**ಪಾರ್ವತಿ**: ದಂಡಧರಾ, ಯಾರಿಂದ ರಾಜ್ಯವನ್ನು ಕೊಡಿಸಬೇಕಾಗಿದೆ?

**ಯಮ**: ಶ್ರೀಮದಾಚಾರ್ಯರಿಂದ.

**ಶಂಕರ**: ಎಲೋ ಅವಿವೇಕಿ. ಯಾವನದು ಆಚಾರ್ಯ?

**ಯಮ**: ನನ್ನ ಸ್ಥಾನದಲ್ಲಿ ತಾವು ನಿಯೋಜಿಸಿರುವ ಆಚಾರ್ಯರಿಂದ.

**ಶಂಕರ**: ಮಂಕ. ನಿನಗೆ ಪಿತ್ತವು ಚನ್ನಾಗಿ ಏರಿದಂತಿದೆ. ಅದೇನು ವಿವರವಾಗಿ ನುಡಿ.

**ಪಾರ್ವತಿ**: ಕೋಪಿಸಿಕೊಳ್ಳಬೇಡಿ.

**ಯಮ**: ದಯಾಸಾಂದ್ರಾ, ತಮ್ಮಪ್ಪಣೆಯಿಲ್ಲದೆ ಹೊಸತೊಂದು ಸಂಶೋಧನೆಗಾಗಿ ನಾನೋರ್ವ ಸಶರೀರ ಮಾನವನನ್ನು ಕರೆತರಿಸಿದ್ದೆ.

**ಶಂಕರ**: ಖೂಳ. ಅನಂತರ.

**ಯಮ**: ಆತನನ್ನೇ ತಾವು ನನ್ನ ಸ್ಥಾನದಲ್ಲಿ ನಿಯಮಿಸಿ ನನ್ನನ್ನು ಸ್ಥಾನಚ್ಯುತನನ್ನಾಗಿ ಮಾಡಿದ್ದೀರಿ.

**ಶಂಕರ**: ಮಹದಾಶ್ಚರ್ಯ !

**ಪಾರ್ವತಿ**: ಪ್ರಭೂ! ನಿಮ್ಮ ಕೆಲಸವು ನಿಮಗೇ ಆಶ್ಚರ್ಯವನ್ನುಂಟು ಮಾಡುತ್ತದಲ್ಲವೆ?

**ಶಂಕರಃ** ಅದು ನಾನು ಮಾಡಿದ ಕೆಲಸವಲ್ಲ. ಇರಲಿ, ಯಮ ಧರ್ಮಾ! ಮುಂದಕ್ಕೆ—

**ಯಮ**: ನಾನು ತಮ್ಮನ್ನು ಕಂಡು ಮರಳಿ ನನ್ನ ರಾಜಧಾನಿಯ ಮಹಾದ್ವಾರವನ್ನು ಸಮೀಪಿಸಲಾಗಿ ದ್ವಾರಪಾಲಕನು ನನ್ನನ್ನು ತಡೆಗಟ್ಟಿ ಪುರಪ್ರವೇಶ ಮಾಡಲು ಬಿಡಲಿಲ್ಲ.

**ಶಂಕರ**: ಯೋಗ್ಯ ಕೆಲಸವನ್ನೇ ಮಾಡಿದ್ದಾನೆ.

**ಪಾರ್ವತಿ:** ಅನಂತರವೇನಾಯಿತು ಯಮಧರ್ಮಾ?

**ಯಮ:** ಸ್ವಾಮಿಯ ಆಜ್ಞೆಯಾಗಿದೆಯೆಂದೂ, ನನ್ನ ಪದಚ್ಯುತಿಯಾಗಿದೆಯೆಂದೂ, ಆಚಾರ್ಯರು ಸಿಂಹಾಸನಾರೂಢರಾಗಿರುವರೆಂದೂ, ನಾನೂ ಮುನ್ನಡೆದರೆ ಸ್ವಾಮಿಯ ಹಣೆಗಣ್ಣಿನುರಿಗೆ ತುತ್ತಾಗುತ್ತೇನೆಂದೂ ಹೇಳಿದನು.

**ಪಾರ್ವತಿ:** ಅಯ್ಯೋ ಪಾಪ. ಎಂಥಾ ಅನ್ಯಾಯವಾಗಿದೆ!

**ಶಂಕರ:** ಅನ್ಯಾಯವೇನು? ಎಲ್ಲವೂ ಅವನ ತುಂಟತನದ ಫಲ. ಮೂರ್ಖನಿಗೆ ಸಂಶೋಧನೆಯಂತೆ; ಸಶರೀರ ಮಾನವನನ್ನು ಹಿಡಿದೆಳೆದು ತರಿಸಿದನಂತೆ; ಅಯೋಗ್ಯ. ಹದ್ದುಮೀರಿ ನಡೆಯಲನುಮತಿ ಕೊಟ್ಟವರಾರೊ? ಯಾವ ಉತ್ತಮ ಸ್ಥಾನವನ್ನು ಸಂಪಾದಿಸಲು ಸಂಶೋಧನೆಯನ್ನ ಪ್ರಾರಂಭಿಸಿದೆ? ಇದ್ದೊಂದು ಸ್ಥಾನವನ್ನು ಕಳೆದುಕೊಳ್ಳದಂತೆ ವರ್ತಿಸೆಂದು ಹಲವಾರು ಬಾರಿ ಹೇಳಿದ್ದರೂ ಲೆಕ್ಕಿಸದೆ ಎಲ್ಲೆಮೀರಿ ಹರಿಯತೊಡಗಿದ್ದೀಯೆ. ಒಳ್ಳೆಯ ಪ್ರಾಯಶ್ಚಿತ್ತವಾಗಿದೆ. ಇನ್ನು ತೊಲಗಿಲ್ಲಿಂದ--

**ಪಾರ್ವತಿ:** ತಾವಿಷ್ಟು ಕೋಪಿಸಿದರೆ ಹೇಗೆ? ಮಕ್ಕಳನ್ನು ತಿದ್ದಿ ಸನ್ಮಾರ್ಗಕ್ಕೆ ತರುವುದು ನಮ್ಮ ಕರ್ತವ್ಯ. ಕಂದನನ್ನು ಕೈ ಬಿಟ್ಟರೆ ಎಲ್ಲಿಗೆ ಹೋಗಬೇಕು ನೋಡಿ?

**ಯಮ:** ದಯಾನಿಧೆ, ದೀನರಕ್ಷಕಾ! ನಿಮ್ಮ ಹೊರತು ಗತಿ ಕಾಣೆ. (ಹಾಡುವನು.)

**ಪಾರ್ವತಿ:** ಮೇಲಕ್ಕೇಳು ಮಗು.

**ಶಂಕರ:** ಪಾರ್ವತೀ! ನಮಗೂ ಕುಂದನ್ನುಂಟುಮಾಡುವ ಇಂಥಾ ಮಕ್ಕಳಿಂದಾಗಬೇಕಾದುದೇನು? ಒಬ್ಬ ಕ್ಷುದ್ರ ಮಾನವನು ಇವನನ್ನು ಸಿಂಹಾಸನದಿಂದ ತಳ್ಳಿದ್ದಾನೆಂದರೆ ಇವನ ಯೋಗ್ಯತೆಯು ಯಾವ ಮಟ್ಟದಲ್ಲಿದೆ ನೋಡು.

**ಪಾರ್ವತಿ:** ನಾಥಾ! ಪತಿತರೆಂದೂ ಹೀನರೆಂದೇ ಪರಿಗಣಿಸಲ್ಪಟ್ಟಿದ್ದಾರೆ.

**ಶಂಕರ:** ರಾಜ್ಯಭ್ರಷ್ಟನಾಗಿ, ಮಾನಭಂಗ ಹೊಂದಿ, ಪದವಿಯ

ಗೌರವವನ್ನು ಮಣ್ಣುಪಾಲು ಮಾಡಿ, ದೊಡ್ಡ ಸಂಶೋಧಕನಾಗಿದ್ದಾನೆ.

**ಪಾರ್ವತಿ:** ಮುಗಿದ ಮಾತನ್ನು ಪದೇ ಪದೇ ಆಡಿದರೆ ಪ್ರಯೋಜನ ವೇನು? ಕೂಡಲೆ ಎಲ್ಲವನ್ನೂ ವಿಚಾರಿಸಿ, ಅಪರಾಧಿಯನ್ನು ಶಿಕ್ಷಿಸಿ, ಯಮ ಧರ್ಮನಿಗೆ ಪುನಃ ರಾಜ್ಯಭೋಗವನ್ನುಂಟು ಮಾಡಿಕೊಡಿ.

**ಶಂಕರ:** ಅಪರಾಧಿ ಯಾರು? ಇವನೇ ಮುಟ್ಠಾಳುಗಳ ಗುರು. ನಮ್ಮ ಆಡಳಿತೆಯಲ್ಲಿದ್ದೂ ಇಂಥಾ ರಾಕ್ಷಸ ಕೃತ್ಯಕ್ಕೆ ಕೈಹಾಕಿದ ಮೇಲೆ ಇವನಿಗೆಲ್ಲಿಯ ಸ್ಥಾನ? ಇನ್ನೆಲ್ಲಿಯ ಮಾನ? ಈ ಮೊದಲೇ ಬಂದು ನನ್ನನ್ನು ಕಂಡುಹೋಗಿದ್ದಾನೆ. ಆಗಲಾದರೂ ತನ್ನ ಅಭಿಲಾಷೆಯನ್ನು ನಮ್ಮ ಮುಂದಿರಿಸಬಹುದಾಗಿತ್ತು. ನೋಡು—ಎಷ್ಟು ಮರೆ, ಎಷ್ಟು ಮೋಸ! ಒಳ್ಳೆಯದೆ ಆಗಿದೆ. ಬಿತ್ತಿದಂತೆ ಬೆಳೆ ಬಂದಿದೆ, ಉಂಡು ಸುಖಿಸಲಿ.

**ಪಾರ್ವತಿ:** ಕರುಣಾಕರಾ! ಹಾಗೆಂದರೆ ಇವನ ಸ್ಥಿತಿಯನ್ನು ನೋಡಿ ಎಲ್ಲರೂ ಪರಿಹಾಸ್ಯ ಮಾಡಲಿಕ್ಕಿಲ್ಲವೆ? ನಾವೀಗ ಇವನನ್ನು ದೂರಕ್ಕೆ ತಳ್ಳಿ ದರೆ, ದೇವತೆಗಳಲ್ಲಿಯೂ ಒಗ್ಗಟ್ಟಿಲ್ಲವೆಂದು ಮಾನವರಾಡಿಕೊಳ್ಳುವುದಿಲ್ಲವೆ?

**ಶಂಕರ:** ಆದ್ದರಿಂದ?

**ಪಾರ್ವತಿ:** ಆದ್ದರಿಂದ ಇವನನ್ನೇ ನೇಮಿಸುವುದು.

**ಶಂಕರ:** ಸರಿ, ಸರಿ, ಒಳ್ಳೇ ತೀರ್ಮಾನವಿದು. ಈವೊಂದು ಅಲ್ಪ ಕೆಲಸವನ್ನು ಸರಿಯಾರಿ ಮಾಡಿಕೊಂಡು ಹೋದರೆ ಸಾಕು, ಬೇರೆ ಕೆಲಸ ಗಳನ್ನು ಮಾಡುವ ಸಾಮರ್ಥ್ಯ ನಿನಗಿಲ್ಲವೆಂದು ಹಲವು ಬಾರಿ ಹೇಳಿ ದ್ದರೂ ಸಂಶೋಧಕನಾಗಲು ಪ್ರಯತ್ನಪಟ್ಟನಂತೆ! ವ್ಯಕ್ತಿಗಳ ಯೋಗ್ಯತೆ ಗಳನ್ನು ಪರೀಕ್ಷಿಸಿ, ಪದವಿಗಳನ್ನು ಅನುಗ್ರಹಿಸುವ ನಾವೇ ಇವನಿಗೆ ಬುದ್ಧಿ ವಾದವನ್ನು ಹೇಳಿದ್ದರೂ ಗ್ರಹಿಸದೆ, ಬೇರಾರನ್ನು ಮೆಚ್ಚಿಸಿ, ಇದಕ್ಕಿಂತಲೂ ಉತ್ತಮ ಪದವಿಯನ್ನು ಸಂಪಾದಿಸಲು ಪ್ರಯತ್ನಿಸಿದನೊ? ಅಜ್ಞಾನಿ! ಭೂಲೋಕದಲ್ಲಿಯೂ ನಿನ್ನಂಥ ಮೂರ್ಖರೇ ಹೆಚ್ಚಾಗಿ ಸಂಶೋಧನೆಗಳನ್ನು ಕೈಗೊಂಡು ಜಗತ್ತಿನಲ್ಲೆಲ್ಲಾ ಅಶಾಂತಿಯನ್ನುಂಟು ಮಾಡಿದ್ದಾರೆ. ಪಾರ ಮಾರ್ಥಿಕ ಚಿಂತನೆಯಿಲ್ಲದೆ, ಕೇವಲ ಐಹಿಕ ಸುಖಭೋಗಗಳಿಗೆ ಮನ ಸೋತು, ರಾಕ್ಷಸ ಶಕ್ತಿಗಳನ್ನು ಬೆಳೆಸಿಕೊಂಡು, ವಿಶ್ವವನ್ನೇ ಧ್ವಂಸ

ಗೊಳಿಸುತ್ತಲಿದ್ದಾರೆ. ಆತ್ಮ ಶಕ್ತಿಯನ್ನು ಕಡೆಗಣಿಸಿ ಅಣುಶಕ್ತಿಯನ್ನು ಆರಾಧಿಸುತ್ತಲಿದ್ದಾರೆ. ಲೋಕಕಲ್ಯಾಣ ಕರ್ತೃಗಳಾದ ನಮ್ಮನ್ನು ಮರೆತು ನಿನ್ನಂಥ ಲೋಕ ನಾಶಕರನ್ನು ಆರಾಧಿಸಲು ತೊಡಗಿದ್ದಾರೆ. ಯಾರನ್ನು ಮೆಚ್ಚಿಸಬೇಕೆನ್ನುವ ಪರಿಜ್ಞಾನವೇ ಇಲ್ಲದಾಗಿದೆ ಈ ಜನಕ್ಕೆ.

**ಪಾರ್ವತಿ**: ನಾಥಾ! ಯಮಧರ್ಮನು ತಮ್ಮನ್ನು ಮೆಚ್ಚಿಸಲೆಂದೇ ಈ ಸಂಶೋಧನೆಯನ್ನು ಪ್ರಾರಂಭಿಸಿದನೇನೊ.

**ಶಂಕರ**: ಪಾರ್ವತೀ! ನೀನೂ ಸಾಮಾನ್ಯರಂತೆ ಮಾತನಾಡುತ್ತಿರುವಿ. ನಮ್ಮನ್ನು ಮೆಚ್ಚಿಸಲು ಸಂಶೋಧನೆಗಳು ಬೇಕೆ? ಭಕ್ತಿಯೊಂದಿದ್ದರೆ ಸಾಲದೆ? ಸತ್ಯ ಧರ್ಮಗಳನ್ನು ಮಾತ್ರ ಕಾಪಾಡಿಕೊಂಡು ಬಂದರೆ ಸಾಲದೆ? ಪರಹಿತ ಚಿಂತನೆಯೊಂದಿದ್ದರಾಗದೆ? ಏಕಾಗ್ರಚಿತ್ತನಾಗಿ ಒಮ್ಮೆ ಧ್ಯಾನಿಸಿದರೆ ಸಾಲದೆ? ಇಂಥವರ ಕುಯುಕ್ತಿ, ಕುತಂತ್ರಗಳಿಗೆ ನಾವೂ ಮೋಸ ಹೋಗುತ್ತೇವೆಯೆ? ತಾವಾಗಿಯೇ ತಾಪತ್ರಯಗಳಿಗೆ ತುತ್ತಾಗಿ ತೊಳಲಿ ಬಳಲಿ ಕಂಗಾಲಾಗುತ್ತಾರೆ. ಇಂಥವರನ್ನೂ ರಕ್ಷಿಸುವುದೆಂದರೇನು?

**ಪಾರ್ವತಿ**: ಶಂಭೋ! ಎಡವಿ ಬೀಳುವುದು ಮಾತ್ರ ಅವರ ಕೈಯೊಳಗಿನ ಶಕ್ತಿ. ಬಿದ್ದ ಮೇಲೆ ಏಳುವ ಶಕ್ತಿ ಅನೇಕರಿಗಿಲ್ಲವೇ ಇಲ್ಲ. ಪತಿತರನ್ನು ಉದ್ಧರಿಸುವುದರಿಂದಲೇ ನಿನಗೆ ಪತಿತಪಾವನನೆಂದು ಕರೆಯುತ್ತಾರೆ. ಅನಾಥ ರಕ್ಷಕ ನೀನಲ್ಲವೆ? ನೀನೇ ತಿರಸ್ಕರಿಸಿದ ಮೇಲೆ ಬಡಪ್ರಾಣಿಗಳು ಮತ್ತೆಲ್ಲಿಗೆ ಹೋಗಬಲ್ಲವು? ಜಗದಾದಿಗುರುವಾದ ನೀನು ಯಮಧರ್ಮನಿಗೊಂದು ಉತ್ತಮ ಪಾಠವನ್ನು ಕಲಿಸಿದೆ. ಎಷ್ಟಾದರೂ ನಮ್ಮ ಕಂದ. ಮನ್ನಿಸಿ ಬಿಡು. ಅವನ ಪರವಾಗಿ ನಾನೂ ಕೇಳಿಕೊಳ್ಳುತ್ತೇನೆ. (ಸೆರಗೊಡ್ಡಿ ಬೇಡಿಕೊಳ್ಳುವಳು.)

**ಶಂಕರ**: ಪಾರ್ವತೀ! ಎಲ್ಲರ ಶ್ರೇಯಸ್ಸನ್ನು ಕೋರುವವಳು ನೀನೊಬ್ಬಳೆ. ನಿನ್ನಿಂದಲೇ ಲೋಕ ಕಲ್ಯಾಣ. ಆಗಲಿ, ನಿನ್ನಿಚ್ಛೆಯಂತೆ ಯಮಧರ್ಮನನ್ನು ಮನ್ನಿಸಿದ್ದೇನೆ. ಯಮಧರ್ಮಾ! ಪಾರ್ವತಿಯ ಪ್ರೀತಿಗೆ ಪಾತ್ರನಾದ ನೀನೇ ಧನ್ಯ. –

**ಯಮ:** ಕರುಣಾಕರಾ! ತಮ್ಮಿರ್ವರ ಅನುಗ್ರಹಕ್ಕೆ ಪಾತ್ರನಾದ ನಾನೇ ಧನ್ಯ.

**ಪಾರ್ವತಿ:** ಪ್ರಭೂ! ಆ ಆಚಾರ್ಯನ ವಿಚಾರವಾಗಿ ತಾವು ಗಮನಿಸಲೇ ಇಲ್ಲವೆ?

**ಶಂಕರ:** ಕಲ್ಯಾಣೀ! ಏನೆಂದು ಹೇಳಲಿ? ನಿನ್ನ ಮಾತುಗಳೇ ಕಿವಿಯ ಮೇಲೆ ಬೀಳದಂತೆ, ದೀರ್ಘಾಲೋಚನಾಸಕ್ತನಾಗಿದ್ದೆನಲ್ಲವೆ?

**ಪಾರ್ವತಿ:** ಅಹುದಹುದು.

**ಶಂಕರ:** ಹಾಗಿದ್ದುದರಿಂದ ಇವರ ಕಡೆ ಮನಸ್ಸು ಹೋಗಲಿಲ್ಲ. ಮನಸ್ಸು ಕೊಟ್ಟಿದ್ದರೆ ಆ ಆಚಾರ್ಯನ ಕಪಟತನಕ್ಕೆ ಎಡೆಯಿರುತ್ತಿರಲಿಲ್ಲ. ಆದರೆ ಅವನ ಸಾಮರ್ಥ್ಯವು ಕೊಂಡಾಡುವಂಥದೆ! ಯಾವನ ಹೆಸರನ್ನು ಕೇಳಿದರೆ ನಡನಡುಗುತ್ತಲಿದ್ದನೋ ಅಂಥವನನ್ನೇ ಬಲೆ ಹಾಕಿದ್ದಾನೆ, ನೋಡಿಕೊ. ಎಷ್ಟು ಸುಲಭವಾಗಿ ರಾಜ್ಯವನ್ನು ವಶಮಾಡಿಕೊಂಡಿದ್ದಾನೆ ಬಲ್ಲೆಯಾ?

**ಪಾರ್ವತಿ:** ಸ್ವಾಮಿ! ತಮ್ಮಂಥವರನ್ನೇ ಬಲೆ ಹಾಕುವ ಮಾನವರಿಗೆ ಈ ಯಮಧರ್ಮನೊಬ್ಬ ದೊಡ್ಡ ವ್ಯಕ್ತಿಯೆ? ತ್ರಿಮೂರ್ತಿಗಳನ್ನೇ ವಶಪಡಿಸಿಕೊಳ್ಳುವ ಶಕ್ತಿಯುಳ್ಳ ಜನರಿಗೆ ಇವನ ರಾಜ್ಯವನ್ನು ವಶಪಡಿಸಿಕೊಳ್ಳುವುದಾಶ್ಚರ್ಯವೆ? ಈ ಮಾನವರಿಗೆ ಮರುಳಾಗಿ 'ಮರುಳ ಶಂಕರ'ನೆಂಬ ಬಿರುದನ್ನು ಸಂಪಾದಿಸಿಕೊಂಡಿರುವಿರಿ. ನಿಮ್ಮ ಪಾಡೇ ಹೀಗಾದ ಮೇಲೆ ಈ ಯಮಧರ್ಮನು ಮೋಹಗೊಂಡುದೇನಾಶ್ಚರ್ಯ? ಗುರುವಿನಂತೆ ಶಿಷ್ಯ.

**ಶಂಕರ:** ಪಾರ್ವತೀ! ನಮ್ಮೆಲ್ಲರ ಯೋಗ್ಯತೆಯನ್ನು ಒಂದೇ ತಕ್ಕಡಿಯಲ್ಲಿ ತೂಗಿದೆಯಲ್ಲವೆ? ಭೇಷ್.

**ಪಾರ್ವತಿ:** ನಾಥಾ! ಇನ್ನು ಕೂಡಲೆ ಹೊರಡಿ. ಯಮಧರ್ಮನಿಗೆ ನಂದವನ್ನುಂಟುಮಾಡಿ. ನಿಮ್ಮ ವಾತ್ಸಲ್ಯವನ್ನು ಮತ್ತೊಮ್ಮೆ ಜಗತ್ತಿಗೆ ಪ್ರಕಟಿಸಿರಿ. ದಂಡಧರಾ! ಹೀಗೆ ಬಾ. ಶಂಕರನಿಂದ ಆಶೀರ್ವಾದವನ್ನು ಪಡೆ. (ಯಮನು ನಮಸ್ಕರಿಸುವನು.)

**ಶಂಕರ:** ಮಂಗಳವಾಗಲಿ ಮೇಲಕ್ಕೇಳು.

**ಯಮ:** ಮಾತೆಗೆ ನಮಸ್ಕರಿಸುವೆನು. (ಪಾರ್ವತಿಗೆ ನಮಿಸುವನು.)

**ಪಾರ್ವತಿ:** ಶುಭವಾಗಲಿ, ಮೇಲಕ್ಕೇಳು. ದುರ್ಬುದ್ಧಿ ದೂರವಾಗಿ, ಅವಿಚ್ಛಿನ್ನವಾದ ಯಶಸ್ಸು ದೊರೆಯಲಿ. ಚಿರಕಾಲ ಶಾಂತಚಿತ್ತನಾಗಿದ್ದು ರಾಜ್ಯಭಾರ ಮಾಡು.

**ಯಮ:** ಧನ್ಯನಾದೆ ಮಾತೆ.

**ಶಂಕರ:** ಯಮಧರ್ಮಾ! ಮುಂದೆ ಸಾಗು.

**ಯಮ:** ಮಹದಾಜ್ಞೆ. (ಶಂಕರನೂ ಯಮಧರ್ಮನೂ ತೆರಳುವರು. ಪಾರ್ವತಿಯು ಅವರನ್ನು ಹಿಂಬಾಲಿಸಿ ಸ್ವಲ್ಪ ಮುಂದಕ್ಕೆ ಬರುವಳು. ಅರಣ್ಯದ ತೆರೆ ಬೀಳುವುದು.)

**ಪಾರ್ವತಿ:** ಲೀಲಾಮೂರ್ತೀ! ಭಕ್ತವತ್ಸಲಾ! ಯಾರಿಂದಲೂ ಅರಿಯಲಾಗದು ನಿನ್ನ ಮಹಿಮೆಯನ್ನು. ನಿನಗೆ ಅನಂತಾನಂತ ವಂದನೆಗಳು. (ಕೈಮುಗಿದು ನಿಂತು ಹಾಡನ್ನು ಹಾಡಿ ತೆರಳುವಳು.)

---

## ದೃಶ್ಯ ೨

[ಯಮಪುರಿಯ ಮಹಾದ್ವಾರ. ಓರ್ವ ದ್ವಾರಪಾಲಕನು ಪಹರೆ ತಿರುಗುತ್ತಲಿರುವನು. ಶಂಕರನೂ ಯಮಧರ್ಮನೂ ಪ್ರವೇಶಿಸುವರು.]

**ಶಂಕರ:** (ಮಹಾದ್ವಾರದ ಕಡೆ ನೋಡಿ) ಒಳ್ಳೆಯ ಏರ್ಪಾಟು ಮಾಡಿದ್ದಾರೆ. ಎಂಥಾ ಮುಂದಾಲೋಚನೆ! ಆಚಾರ್ಯನು ಬಹು ಬುದ್ಧಿಶಾಲಿ. ನಮ್ಮನ್ನು ಮೆಚ್ಚಿಸಬೇಕೆನ್ನುವ ವಿಚಾರದಲ್ಲಿಯೇ ತಲ್ಲೀನನಾಗಿದ್ದಾನೆ. ಇವನ ಈ ಮರ್ಕಟತನದಲ್ಲಿಯೂ ಭಕ್ತಿರಸ ತುಂಬಿ ತುಳುಕುತ್ತಿದೆ. ಒರೆಗಲ್ಲಿಗೆ ತಿಕ್ಕಿ ಇದೊಂದು ಅಪರಂಜಿಯೆಂದು ಜಗತ್ತಿಗೆ ತೋರಿಸುತ್ತೇನೆ. ಇವನ ಕೀರ್ತಿಯನ್ನು ಅಮರಗೊಳಿಸುತ್ತೇನೆ. (ಯಮನನ್ನು ಕುರಿತು)

ದಂಡಧರಾ! ನಡೆ ದ್ವಾರಪಾಲಕನನ್ನು ಮಾತನಾಡಿಸಿ ಆಸ್ಥಾನಕ್ಕೆ ಹೋಗುವ. (ದ್ವಾರಪಾಲಕನ ಬಳಿಗೆ ಬಂದು) ಎಲೈ! ಮಹಾದ್ವಾರವನ್ನು ತೆರೆ.

**ದ್ವಾರಪಾಲಕ**: ಪ್ರಭುಗಳಡಿದಾವರೆಯಲ್ಲಿ ಅರಿಕೆಮಾಡಿಕೊಳ್ಳು ತ್ತೇನೆ—ತಾವು ಪ್ರವೇಶಿಸಲು ತಮ್ಮಲ್ಲಿ ಪರವಾನಿಗೆಚೀಟಿಯುಂಟೇ? ಇದ್ದರೆ ದಯವಿಟ್ಟು ಕೊಡಿ.

**ಯಮ**: ಹುಚ್ಚಾ, ಜಗದ್ರಕ್ಷಕನಾದ ಶಂಕರನಿಗೂ ಈ ತಡೆಯೆ?

**ದ್ವಾರಪಾಲಕ**: ಜೀಯಾ, ಆಳುವ ಸ್ವಾಮಿಗಳವರ ಅಪ್ಪಣೆಯ ಮೀರಿ ಪ್ರವೇಶ ಪತ್ರವಿಲ್ಲದೆ ಯಾರನ್ನೂ ಒಳಗೆ ಬಿಡಕೂಡದು. ಹೊಸ ಕಾನೂನು ಗಳೆಲ್ಲವೂ ಪ್ರಭು ಶಂಕರನ ಮುದ್ರೆಸಮೇತವೇ ಈಗ ಹೊರಬೀಳುತ್ತಲಿವೆ. ಹೀಗಿರುವಾಗ ಆಜ್ಞೆಯನ್ನುಲ್ಲಂಘಿಸುವ ಶಕ್ತಿ ನನ್ನಲ್ಲಿಲ್ಲ. ದಯವಿಟ್ಟು ನನ್ನನ್ನು ಮನ್ನಿಸಿ ಬಿಡಿ.

**ಶಂಕರ**: ಆಗಲಿ. ಪರವಾನಿಗೆಯನ್ನು ಹೊಂದುವ ಬಗೆಯಾದರೂ ಹೇಗೆ?

**ದ್ವಾರಪಾಲ**: ತಮ್ಮದೊಂದು ಮುದ್ರಿಕೆಯನ್ನು ಕೊಟ್ಟರೆ, ಅರಸರಿಗೆ ತೋರಿಸಿ, ಕೂಡಲೆ ಅಪ್ಪಣೆಯನ್ನು ತರುತ್ತೇನೆ.

**ಶಂಕರ**: ಸರಿ. ಇಗೋ ಇದನ್ನು ತೆಗೆದು ಕೊ. ಕೂಡಲೆ ಹೋಗಿ ಬಾ. (ಒಂದು ಮುದ್ರಿಕೆಯನ್ನು ಕೊಡುವನು.)

**ದ್ವಾರಪಾಲ**: ಮಹದಾಜ್ಞೆ. (ಹೋಗುವನು.)

**ಶಂಕರ**: ಯಮಧರ್ಮಾ! ನೋಡಿದೆಯಾ, ನಮ್ಮ ಹೆಸರಿನಿಂದಲೇ ನಮ್ಮನ್ನು ಬಂಧಿಸಿಬಿಟ್ಟಿದ್ದಾನೆ! ಹೇಗಿದೆ ಭರತ ಖಂಡದವರ ಶಕ್ತಿ! ಆದ್ದ ರಿಂದಲೇ ಈ ಜನರಿಗೆ ನಾವು ಅದೃಶ್ಯರಾಗಿರುತ್ತೇವೆ. ಕೊನೆಯ ಪಕ್ಷ ಈ ದಿನದ ವಿಚಿತ್ರವನ್ನಾದರೂ ಯೋಚಿಸಿದೆಯಾ? ಅನಂತಕಾಲ ವಿವಿಧ ತಪಸ್ಸುಗಳನ್ನಾಚರಿಸಿದವರಿಗೂ ದರ್ಶನವನ್ನೀಯದ ನಾವು, ಈ ಆಚಾರ್ಯ ನಿಗೆ ನಾವಾಗಿಯೇ ದರ್ಶನವನ್ನೀಯುತ್ತಲಿದ್ದೇವೆ. ಎಂಥಾ ಮಾಟವನ್ನು ಮಾಡಿದ್ದಾನೆ ನೋಡು! (ದ್ವಾರಪಾಲಕನು ಮರಳಿ ಬರುವನು.)

**ದ್ವಾರಪಾಲ:** ಪ್ರಭುಗಳು ದಯಮಾಡಿಸಬಹುದು. ಆದರದಿಂದ ಬರಮಾಡಬೇಕೆಂದು ಮಹಾರಾಜರವರ ಅಪ್ಪಣೆಯಾಗಿದೆ. ಇತ್ತಿತ್ತ ದಯ ಮಾಡಿಸಿ.

**ಶಂಕರ:** ಯಮಧರ್ಮ ಮುಂದುವರಿ.

**ದ್ವಾರಪಾಲ:** ಅದಾಗದು ಪ್ರಭು. ಕೇವಲ ತಾವು ಮಾತ್ರ ಬರ ಬಹುದೆಂದು ಅಪ್ಪಣೆಯಾಗಿದೆ. ಧರ್ಮಪ್ರಭುಗಳು ಅನುಮತಿಯನ್ನು ಹೊಂದಿಲ್ಲ.

**ಶಂಕರ:** (ತಲೆದೂಗಿ) ಎಲೋ ನಾವೊಬ್ಬರೇ ಬರಲಾಗದು. ಯಮ ಧರ್ಮರಿಗೂ ಪರವಾನಿಗೆಯನ್ನು ಕೊಂಡು ಬಾ. ಇಗೋ ಇದನ್ನು ತೋರಿಸು ನಿಮ್ಮ ರಾಯರಿಗೆ. (ಬೇರೊಂದು ಮುದ್ರಿಕೆಯನ್ನು ಕೊಡುವನು. ಚಾರನು ಅದನ್ನು ಕೊಂಡುಹೋಗುವನು.) ನಿನ್ನ ರಾಜ್ಯದಲ್ಲಿ ಹೀಗಿತ್ತೆ ಯಮಧರ್ಮ?

**ಯಮ:** ಇಲ್ಲ ದೇವಾ.

**ಶಂಕರ:** ನಿರ್ಬಲರಾದ ಮಾನವರನ್ನು ನೋಡಿದೆಯಾ? ಜೀವನದಲ್ಲಿ ಹಲವಾರು ಕಷ್ಟನಿಷ್ಠುರಗಳಿಗೆ ಸಿಕ್ಕಿಬಿದ್ದು ಅವುಗಳಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿ ಕುಶಾಗ್ರ ಬುದ್ಧಿಗಳಾಗಿದ್ದಾರೆ. ತಮ್ಮ ಭಾವೀ ಜೀವನವು ಸುಗಮವಾಗಿರಲೆಂದು ವಿವಿಧ ಕ್ಷೇತ್ರಗಳಲ್ಲಿ ಶಿಸ್ತನ್ನುಂಟುಮಾಡಿ ಕೊಂಡಿದ್ದಾರೆ. ಅವರಲ್ಲಿ ಹಲವರು ಭೂಲೋಕದ ಅನಿತ್ಯ ಸುಖಕ್ಕಾಗಿ ತೊಳಲಿ ಬಳಲುತ್ತಿದ್ದರೂ ಕೆಲವರಲ್ಲಿಯಾದರೂ ಪಾರಮಾರ್ಥಿಕ ವಿಚಾರಗಳು ಸ್ಫುಟವಾಗಿ ಕಂಡುಬರುತ್ತಿವೆ. ಅದರಲ್ಲಿಯೂ ಪವಿತ್ರ ಕ್ಷೇತ್ರವೆಂದೆನಿಸಿಕೊಳ್ವ ಭರತಖಂಡದಲ್ಲಿ ಏಕಾಗ್ರಚಿತ್ತರಾಗಿ, ದ್ವಿಗುಣಾ ತೀತರಾಗಿ, ತ್ರಿಕರಣಶುದ್ಧಿಯುಳ್ಳವರಾಗಿ, ಚತುಃಶಾಸ್ತ್ರಪಂಡಿತರಾಗಿ, ಪಂಚೇಂದ್ರಿಯಗಳನ್ನು ಜಯಿಸಿ, ಷಡ್ವೈರಿಗಳನ್ನು ಪ್ರತಿಭಟಿಸಿ, ಸಪ್ತ ವ್ಯಸನಗಳನ್ನು ದೂರಿರಿಸಿ, ಅಷ್ಟಮದಗಳಿಗೊಳಗಾಗದೆ, ನವವಿಧ ಭಕ್ತಿಯಿಂದ ಅಹೋರಾತ್ರಿ ನಮ್ಮನ್ನಾರಾಧಿಸುವ ಜನರು ಅನೇಕರಿದ್ದಾರೆ. ಅಂಥಾ ಜನ ರಿಗೆ ಮಾತ್ರ ನಮ್ಮ ದರ್ಶನವಾಗುವುದು, ನಮ್ಮನುಗ್ರಹ ಲಭಿಸುವುದು.

ಸುಖದಲ್ಲಿ ಓಲಾಡಿಕೊಂಡು, ಧರ್ಮಬಾಹಿರರಾಗಿ, ಮೆರೆದಾಡುವ ನಿಮ್ಮಂಥವರ ಕಣ್ಣಿಗೆ ಅಂಧಕಾರ ಕವಿದಿರುತ್ತದೆ. ಅಲ್ಲಸಲ್ಲದ ಕ್ಷುದ್ರ ಸಂಶೋಧನೆಗಳನ್ನು ಪ್ರಾರಂಭಿಸುತ್ತೀರಿ. ನಿಷ್ಕಳಂಕವಾದ, ನಿಶ್ಚಲವಾದ, ನಿರಂತರವಾದ ಅವರ ಭಕ್ತಿಯೆಲ್ಲಿ? ಮರಿಮೋಸಗಳಿಂದ ತುಂಬಿತುಳುಕಾಡುವ ನಿಮ್ಮ ಕುತ್ಸಿತ ಸ್ವಾಮಿದ್ರೋಹವೆಲ್ಲಿ? ಅವರು ಅಹೋರಾತ್ರಿ ಪರಹಿತ ಚಿಂತನಾತತ್ಪರರಾಗಿದ್ದರೆ, ನೀವು ಸ್ವಯಂ ಪ್ರತಿಷ್ಠೆಗಾಗಿ ಹೆಣಗಾಡುತ್ತಲಿರುವಿರಿ. ಕಷ್ಟಪಟ್ಟು ಅವರು ಮೋಕ್ಷಮಾರ್ಗವನ್ನು ಹುಡುಕಿಕೊಳ್ಳುತ್ತಿರುವಾಗ, ನೀವು ಅಧೋಗತಿಗೆ ಮಾರ್ಗವನ್ನು ಸರಿಪಡಿಸಿಕೊಳ್ಳುತ್ತಿರುವಿರಿ. ಅದು ಮನೋವಿಕಾಶದ ಫಲ, ಇದು ಮನೋವಿಕಾರದ ಫಲ. ಅವರದು ಸನ್ಮಾರ್ಗ, ನಿಮ್ಮದು ದುರ್ಮಾಗ. (ಸೇವಕನು ಮರಳಿ ಬರುವನು.)

**ದ್ವಾರಪಾಲ:** ಜೀಯಾ! ತಾವಿಬ್ಬರೂ ಬರಬಹುದೆಂದು ಹೇಳಿಕೆಯಾಗಿದೆ. ಮಹಾದ್ವಾರವನ್ನು ತೆರೆದಿರುತ್ತೇನೆ. ದಯವಿಟ್ಟು ಹೀಗೆ ಬರಬೇಕು.

**ಶಂಕರ:** ಸಂತೋಷ. ಮುಂದುವರಿ.

**ದ್ವಾರಪಾಲ:** ಹೀಗೆ ಹೀಗೆ. (ದ್ವಾರಪಾಲಕನು ಮುಂದೆ ಹೋಗುವನು, ಶಂಕರನೂ ಯಮಧರ್ಮನೂ ಹಿಂಬಾಲಿಸುವರು.)

---

## ದೃಶ್ಯ ೩

[ಯಮಧರ್ಮನಾಸ್ಥಾನ. ಆಚಾರ್ಯನು ಆಸನಾರೂಢನಾಗಿದ್ದಾನೆ. ಪಕ್ಕದಲ್ಲಿ ಚಿತ್ರಗುಪ್ತನು ಕುಳಿತು-ಕೊಂಡಿದ್ದಾನೆ. ಹಿಂಭಾಗದಲ್ಲಿ ಓರ್ವ ಚಾರನು ಚಾಮರವನ್ನು ಬೀಸುತ್ತಲಿದ್ದಾನೆ.]

**ಆಚಾರ್ಯ:** ಚಿತ್ರಗುಪ್ತರೇ! ಇನ್ನು ಮೇಲೆ ನೀವು ಬಲ, ಅವರು ಬಲ. ಏನಾದರೂ ಮಾಡಿಕೊಳ್ಳಿ. ಒಟ್ಟಿನಲ್ಲಿ ನೀವೆಲ್ಲರೂ ಇಂದಿನ ವರೆಗಿನ ನಮ್ಮ ಕಾರಭಾರವನ್ನು ಮೆಚ್ಚಿದ್ದರೆ ಸಾಕು.

**ಚಿತ್ರಗುಪ್ತ**: ನಾವು ಮೆಚ್ಚದೇನು ಪ್ರಭು? ಆದರೆ ಈ ದಿನ ಶಿವನು ಯಮಧರ್ಮನಿಗೆ ಕನಿಕರ ತೋರಿಸುವ ಬದಲು ನಮ್ಮೆಲ್ಲರಿಗೂ ಕನಿಕರ ತೋರಿಸಿ ತಮ್ಮನ್ನೇ ಚಿರವಾಗಿ ಈ ಪಟ್ಟವನ್ನಲಂಕರಿಸುವಂತೆ ಮಾಡಿದ್ದರೆ....

**ಆಚಾರ್ಯ**: ಏನಾಗುತ್ತಲಿತ್ತು?

**ಚಿತ್ರಗುಪ್ತ**: ಪ್ರಜೆಗಳ ಹಿತಚಿಂತನೆಯಾಗುತ್ತಲಿತ್ತು....

**ಆಚಾರ್ಯ**: ಇನ್ನು ಮೇಲೆ ಯಾವುದಕ್ಕೂ ಕೊರತೆ ಬಾರದು. ಶಿವನು ಚನ್ನಾಗಿ ಬುದ್ಧಿ ಕಲಿಸಿರುತ್ತಾನೆ. ಯಮಧರ್ಮನೆಂದೂ ಅಧರ್ಮಿಯಾಗಲಾರನು. [ದ್ವಾರಪಾಲಕನು ಮುಂದೆ ಬರುತ್ತಾನೆ. ಹಿಂದಿನಿಂದ ಈಶ್ವರನೂ ಯಮನೂ ಪ್ರವೇಶಿಸುವರು.]

**ದ್ವಾರಪಾಲ**: ಶ್ರೀಮನ್ಮಹಾರಾಜಾಧಿರಾಜ, ರಾಜಪರಮೇಶ್ವರ, ಆಚಾರ್ಯವರ್ಯರಿಗೆ ಜೈ. (ಈಶ್ವರನನ್ನು ಕುರಿತು) ಪ್ರಭುಗಳು ಹೀಗೆ ದಯ ಮಾಡಿಸಬೇಕು. (ಎಲ್ಲರೂ ಎದ್ದು ನಿಲ್ಲುವರು.)

**ಆಚಾರ್ಯ, ಚಿತ್ರಗುಪ್ತರು**: ಪ್ರಭು ಶಂಕರನಡಿದಾವರೆಯಲ್ಲಿ ಈ ಕಿಂಕರರ ಅನಂತಾನಂತ ವಂದನೆಗಳು.

**ಶಂಕರ**: (ಭವ್ಯ ಮಂದಿರವನ್ನು ನೋಡಿ ಮೆಚ್ಚಿ) ಸರ್ವರಿಗೂ ಮಂಗಳವಾಗಲಿ.

**ಆಚಾರ್ಯ**: ಧನ್ಯ, ಧನ್ಯ, ಇಂದಿಗೆ ನಾನೇ ಧನ್ಯ. ಪರಮಾತ್ಮಾ! ಶ್ರೀಹರೀ! ನಿನ್ನ ಬೇರೊಂದು ರೂಪವನ್ನು ತೋರಿಸಿದೆಯಾ? ಭಕ್ತನ ಮೊರೆಯನ್ನು ಲಾಲಿಸಿದೆಯಾ? ನಿನ್ನ ದಿವ್ಯ ಚರಣ ಕಮಲಗಳಿಗೆ ಸಾಷ್ಟಾಂಗ ನಮಸ್ಕಾರಗಳು. (ನಮಸ್ಕರಿಸುವನು.)

**ಶಂಕರ**: ಎಲೋ! ಏನಿದೆಲ್ಲ ಉದ್ಧಟತನ?

**ಆಚಾರ್ಯ**: ದೇವಾ! ಇದು ಉದ್ಧಟತನವೆ? ಲೀಲಾಮೂರ್ತಿಯ ಮನವನ್ನು ಸೆಳೆಯಲು ಭಕ್ತನದೊಂದು ಲೀಲೆ.

**ಶಂಕರ**: ಲೀಲೆ! ಪುಂಡ, ಸಾಕುಮಾಡು ನಿನ್ನ ವ್ಯರ್ಥಲಾಪವನ್ನು.

**ಆಚಾರ್ಯ**: ಕೋಪಿಸದಿರು ತಂದೆ. ಅಹೋರಾತ್ರಿ ನಿನ್ನ ಗುಣಗಾನ ಮಾಡುತ್ತಿರುವುದು ವ್ಯರ್ಥಾಲಾಪವೇ? ನಿನ್ನ ಸಾಮಿಪ್ಯವನ್ನು

ಹೊಂದಲು ಸತತ ಶ್ರಮಪಡುವುದು ಪುಂಡತನವೆ?

**ಶಂಕರ:** ಎಲೋ ಕಪಟಿ! ಇದು ಗುಣಗಾನವಲ್ಲ, ನಿರರ್ಥಕವಾದ ವಾಗ್ಜಾಲ.

**ಆಚಾರ್ಯ:** ಅನಂತವ್ಯಾಪೀ! ಅಣುರೇಣುಗಳಲ್ಲಿ ಸಂಚರಿಸುವ ನಿನಗೆ ನನ್ನ ಮನಸ್ಸು ಅಭೇದ್ಯವೆ? ಈ ನನ್ನ ಪವಿತ್ರವಾಣಿ ನಿರರ್ಥಕವೆ?

**ಶಂಕರ:** ಧೂರ್ತ, ನಿನ್ನ ಸ್ತೋತ್ರಗಳನ್ನು ಕೇಳಲು ಬಂದವರಲ್ಲ ನಾವು. ಮೋಸ ಕೃತ್ರಿಮಗಳಿಂದ ಯಮನನ್ನು ಸಿಂಹಾಸನದಿಂದ ತಳ್ಳಿ, ಮಾಯಾಜಾಲದಿಂದ ಪ್ರಜೆಗಳನ್ನು ವಶಪಡಿಸಿಕೊಂಡಿರುವ ಈ ಮೋಸಗಾರನನ್ನು ಈ ಐಂದ್ರಜಾಲಕನನ್ನು ಶಿಕ್ಷಿಸಲು ಬಂದಿರುತ್ತೇವೆ.

**ಆಚಾರ್ಯ:** ಸ್ವಾಮಿ! ಈ ಎಲ್ಲ ನಾಟಕಕ್ಕೂ ಸೂತ್ರಧಾರ–ಇಗೋ ಈ ಯಮಧರ್ಮ. ನಾನೀ ರಂಗಭೂಮಿಯನ್ನು ಕನಸಿನಲ್ಲಿಯೂ ನೆನಸಿದವನಲ್ಲ. ನಾನಿಲ್ಲಿ ಪಾತ್ರವಹಿಸಬ್ಬೇಕೆಂದು ಎಂದೂ ಅಪೇಕ್ಷಿಸಿರಲಿಲ್ಲ. ದಿಗ್ದರ್ಶಕನಾದ ನೀನು ಸೂಚಿಸಿದಂತೆ ವರ್ತಿಸಿದ್ದೇನೆ. ಇದು ಮೋಸವೆ? ಐಂದ್ರಜಾಲವೆ? ಇದಕ್ಕೂ ಶಿಕ್ಷೆಯನ್ನು ವಿಧಿಸುವುದೆ?

**ಶಂಕರ:** ಹೂಂ.

**ಆಚಾರ್ಯ:** ನಿದ್ರೆಯಲ್ಲಿದ್ದ ನನ್ನನ್ನು ಎಳೆತರಿಸಿದವ ಈ ಯಮಧರ್ಮ. ಅದೂ ತನ್ನದೊಂದು ಸಂಶೋಧನೆಯಲ್ಲಿ ನೆರವಾಗಬೇಕೆಂದು. ನಾನಿಲ್ಲಿ ದಿಕ್ಕು ತೋಚದೆ ಏಕಾಗ್ರಚಿತ್ತನಾಗಿ ಧ್ಯಾನಿಸಲು, ಭಕ್ತನ ಮೇಲೆ ಕೃಪೆದೋರಿ, ಒಳ ನಿಂತು ಪ್ರೇರೇಪಿಸಿದವ ನೀನು.

**ಶಂಕರ:** (ಹುಸಿ ಮುನಿಸಿನಿಂದ) ಅದೇನು ಗಳಹಲಿದೆಯೋ ಎಲ್ಲವನ್ನೂ ಗಳಹಿಬಿಡು.

**ಆಚಾರ್ಯ:** ಆಗ ಪ್ರಾಣರಕ್ಷಣೆಗಾಗಿ ಇವನನ್ನು ಊರು ಬಿಡಿಸಬೇಕಾಯಿತು. ಆತ್ಮ ಪೋಷಣೆಗಾಗಿ ಯಮಧರ್ಮನ ಪ್ರತಿನಿಧಿಯಾಗಬೇಕಾಯಿತು. ಸ್ವಯಂಪ್ರತಿಷ್ಠೆಗಾಗಿ ಅಧಿಕಾರವನ್ನು ಚಲಾಯಿಸಬೇಕಾಯಿತು. ಇವೆಲ್ಲವೂ ತಪ್ಪೇ? ಇದಕ್ಕೂ ಶಿಕ್ಷೆಯುಂಟೆ? ಉಂಟಾದರೆ ಯಾರಿಗೆ ಶಿಕ್ಷೆ?

**ಶಂಕರ:** ಎಲೋ ಯಮಧರ್ಮಾ! ಯಾರಪ್ಪಣೆಯ ಮೇರೆ

ಊರನ್ನು ಬಿಟ್ಟೆ?

**ಯಮ:** ದೇವಾ! ತಾವು ಕಳಿಸಿದ ಆಜ್ಞಾಪತ್ರವಿಲ್ಲಿದೆ. (ಪತ್ರವನ್ನು ಕೊಡುವನು.)

**ಶಂಕರ:** (ಪತ್ರವನ್ನು ನೋಡಿ, ನಕ್ಕು. ಸ್ವಗತ) ಎಂಥಾ ಜಾಣ್ಮೆ ಇದು! ಈ ಅಕ್ಷರಗಳು ನನ್ನ ಅಕ್ಷರಗಳನ್ನೇ ಹೋಲುತ್ತಿವೆ. ಇವನ್ನು ನೋಡಿ ನಾನೇ ಮೋಸಹೋಗುವಂತಿರುವಾಗ ಇವನು ಮೋಸ ಹೋದುದ ರಲ್ಲಿ ತಪ್ಪಿಲ್ಲ. (ಶಂಕರನು ಆಚಾರ್ಯನ ಮುಖವನ್ನು ನೋಡುವನು. ಆಚಾ ರ್ಯನು ತಲೆ ಬಾಗಿಸುವನು.) ಇರಲಿ, ಯಮಧರ್ಮಾ! ಯಾರ ಅನುಮತಿ ಯಿಂದ ಇವನಿಗೆ ಅಧಿಕಾರವನ್ನೊಪ್ಪಿಸಿಕೊಟ್ಟೆ?

**ಯಮ:** ಜೀಯಾ, ಅಧಿಕಾರವನ್ನು ನಾನೆಂದೂ ಒಪ್ಪಿಸಿಕೊಡಲಿಲ್ಲ.

**ಶಂಕರ:** ಚಿತ್ರಗುಪ್ತಾ! ಹೇಗೀ ಮುಟ್ಠಾಳನು ಅಧಿಕಾರಕ್ಕೆ ಬಂದುದು?

**ಚಿತ್ರಗುಪ್ತ:** ಯಮಧರ್ಮರೇ ಕೊಟ್ಟ ಅಧಿಕಾರ ಪತ್ರವಿಲ್ಲಿದೆ. (ಪತ್ರ ವನ್ನು ಕೊಡುವನು. ಯಮನು ಬೆಚ್ಚಿಬೀಳುವನು.)

**ಶಂಕರ:** (ಪತ್ರವನ್ನೋದಿ ನಸುನಕ್ಕು) ನಿನ್ನದಲ್ಲವೇ ಈ ಪತ್ರ ಯಮ ಧರ್ಮಾ?

**ಯಮ:** (ಪತ್ರವನ್ನು ನೋಡಿ ಚಕಿತನಾಗಿ) ಹೌದೆಂದು ಕಾಣುತ್ತದೆ. ಆದರೆ ಇದನ್ನು ಬರೆದ ಜ್ಞಾಪಕ ಮಾತ್ರವಿಲ್ಲ.

**ಶಂಕರ:** ಮೂರ್ಖ. ಚಿತ್ರಗುಪ್ತಾ! ನೀವಿದ್ದೂ ಈ ಕಪಟಿಯನ್ನು ಸಿಂಹಾಸನಕ್ಕೆ ಕುಳ್ಳಿರಿಸಿದುದೆ?

**ಚಿತ್ರಗುಪ್ತ:** ಪ್ರಭೂ ತಮ್ಮಪ್ಪಣೆಯಾದ ನಂತರ........

**ಶಂಕರ:** ಇದಕ್ಕೂ ನಮ್ಮಪ್ಪಣೆಯೆ?

**ಚಿತ್ರಗುಪ್ತ:** ಹೌದು ಜೀಯ; ಇಲ್ಲಿದೆ, ತಮ್ಮ ಕಡೆಯಿಂದ ಬಂದ ಅಧಿಕಾರ ಪತ್ರ.

**ಶಂಕರ:** (ಪತ್ರವನ್ನು ಕೊಂಡು ಓದಿ ನೋಡಿ) ಎಲೋ ಗಾರುಡಿ! ಇದೆಲ್ಲ ಯಾರ ಕೆಲಸ?

**ಆಚಾರ್ಯ**: ಸರ್ವಜ್ಞನಿಗೆ ನನ್ನ ಹೇಳಿಕೆ ಬೇಕೆ? ಈ ನನ್ನ ಕಾರ್ಯಗಳೆಲ್ಲವೂ ಈ ಮೂರು ಕಾಗದಗಳಿಂದಲೇ ಆದುವು. ಇವು ಈ ನನ್ನ ಕೈಯಿಂದಲೇ ಬರೆಯಲ್ಪಟ್ಟವು. (ಎಲ್ಲರೂ ಆಶ್ಚರ್ಯಗೊಳ್ಳುವರು.)

**ಶಂಕರ**: ದಂಡಧರಾ! ಹೇಗಿದೆ ನಿನ್ನ ಸಂಶೋಧನೆ? (ಆಚಾರ್ಯನನ್ನು ಕುರಿತು) ಎಲೋ ಮೋಸಗಾರ, ಮಾರ್ಜಾಲ, ಯಾರಿಗೆ ಶಿಕ್ಷೆಯನ್ನು ವಿಧಿಸಬೇಕೀಗ? ಯಮನ ಹೆಸರನ್ನು ಕೇಳಿದರೆ ಕಂಠಗತ ಪ್ರಾಣರಾಗುವ ನೀವು ಅವನನ್ನೇ ಬುಡಮೇಲಾಗಿ ಮಾಡುವ ಶಕ್ತಿಯನ್ನು ಸಂಪಾದಿಸಿಕೊಂಡಿದ್ದೀರಿ. ಭೂಲೋಕದಲ್ಲಿ ಮರೆಮೋಸಗಳನ್ನು ಮಾಡಿಯೂ ಶಿಕ್ಷೆಯಿಂದ ತಪ್ಪಿಸಿಕೊಳ್ಳುವಂತೆ ಇಲ್ಲಿಯೂ ಮಾಡಬಹುದೆಂದು ಬಗೆದೆಯಾ? ಧೂರ್ತಾ! ಎಲ್ಲಿಯ ವರೆಗೆ ನಿನ್ನಾಟವನ್ನು ಮುಂದುವರಿಸಿದ್ದೀಯೆ ನೋಡು. ಋಜು ಸ್ವಭಾವದವರಾದ ಇಲ್ಲಿಯವರಿಂದ ನಿನ್ನನ್ನು ಶಿಕ್ಷಿಸುವುದಕ್ಕಿಂತ ನಿನ್ನಂಥ ಇತರೆ ಮರ್ಕಟಗಳಿಂದಲೇ ನಿನ್ನನ್ನು ಶಿಕ್ಷಿಸಬೇಕು. ಹೊರಡಿನ್ನು. ಭೂಲೋಕವನ್ನು ಸೇರಿ, ಅಲ್ಲಿಯ ಅನಂತ ಯಾತನೆಗಳನ್ನು ಅನುಭವಿಸುತ್ತ ಅನಂತಕಾಲ ಬಾಳು, ಮುಟ್ಠಾಳ.

**ಆಚಾರ್ಯ**: ಸ್ವಾಮಿ, ಕಾರ್ಯವು ಮಿಂಚಿಹೋಗಿದೆ. ನಾನು ತಮ್ಮಲ್ಲಿ ಅರಿಕೆಮಾಡಿಕೊಳ್ಳಬೇಕಾದುದನ್ನು ಮಾಡಿಕೊಂಡಿರುತ್ತೇನೆ. ತಮ್ಮಾಜ್ಞೆಯನ್ನು ಮೀರುವ ಬಲವೆನಗಿಲ್ಲ. ಆದರೆ ಭೂಲೋಕಕ್ಕೆ ಹೋಗಿ ಅಲ್ಲಿಯ ಯಾತನೆಗಳನ್ನು ಅನುಭವಿಸುವ ಮೊದಲು ನನ್ನ ಅಲ್ಪ ಕೋರಿಕೆಯೊಂದನ್ನು ತಾವು ನೆರವೇರಿಸಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

**ಶಂಕರ**: ಅಸ್ತು. ಅದೇನು ಕೇಳಿಕೊಳ್ಳುವನಾಗು.

**ಆಚಾರ್ಯ**: ಈ ರಾಜ್ಯವನ್ನು ಮರಳಿ ಒಪ್ಪಿಸಿಕೊಡುವ ಮೊದಲು ಸ್ವಲ್ಪ ಸಮಯದ ವರೆಗೆ ನಾನೊಮ್ಮೆ ಭೂಲೋಕಕ್ಕೆ ಹೋಗಿ ಬರುತ್ತೇನೆ. ಅನಂತರ ಈ ರಾಜ್ಯದ ಸಮಸ್ತ ಭಾಗಗಳನ್ನು ಒಂದೊಂದಾಗಿ ಒಪ್ಪಿಸಿಕೊಡುತ್ತೇನೆ. ಅಲ್ಲಿಯ ವರೆಗೂ ಇಲ್ಲಿಯ ಯಾವ ವಸ್ತುವೂ ತಮ್ಮ ಪ್ರತಿನಿಧಿಯಾದ ಯಮಧರ್ಮನ ಸ್ವಾಧೀನವಾಗುವಂತಿಲ್ಲ.

**ಶಂಕರ**: (ನಸುನಕ್ಕು) ಹಾಗೆಯೆ?

**ಆಚಾರ್ಯ**: ಸತ್ಯವಾಗಿಯೂ. ಬೇಕಿದ್ದರೆ ಸಚಿವೋತ್ತಮರನ್ನು ಕೇಳಿ.

**ಶಂಕರ**: ಇದು ವಾಸ್ತವವೇ ಚಿತ್ರಗುಪ್ತಾ?

**ಚಿತ್ರಗುಪ್ತ**: ಶ್ರೀಮದಾಚಾರ್ಯರ ನುಡಿಯಲ್ಲಿ ಲೇಶಮಾತ್ರವೂ ಸುಳ್ಳಿಲ್ಲ. ಅವರ ಕಾರ್ಯದಕ್ಷತೆಗೆ, ಅವರ ಪ್ರಜಾವಾತ್ಸಲ್ಯಕ್ಕೆ, ಅವರ ನಿಯಮ ನಿಷ್ಠೆಗೆ ಎಲ್ಲರೂ ಮೋಹಗೊಂಡಿದ್ದಾರೆ.

**ಆಚಾರ್ಯ**: ನನ್ನೀ ಆಡಳಿತೆ ಸರ್ವರಿಗೂ ಮೆಚ್ಚಿಗೆಯಾಗಿದೆ. ಸರ್ವ ಸಮ್ಮತವಾದ, ಸರ್ವಮಾನ್ಯವಾದ, ಆದರ್ಶನೀಯವಾದ, ಪ್ರಜಾಸತ್ತಾತ್ಮಕ ಸರಕಾರವನ್ನು ಸ್ಥಾಪಿಸಿದ್ದೇನೆ. ಯೋಗ್ಯನೆಂದು ಭಾವಿಸಿ, ನನ್ನಲ್ಲಿ ಭಕ್ತಿ ಗೌರವಗಳನ್ನಿಟ್ಟು, ನನ್ನನ್ನೇ ತಮ್ಮ ನಾಯಕನನ್ನಾಗಿ ಮಾಡಿಕೊಂಡಿದ್ದಾರೆ ಇಲ್ಲಿಯ ಜನ. ಧರ್ಮಾವಲಂಬಿಯಾದ ಕಾರಣ ನನ್ನಾಜ್ಞೆಯಿಲ್ಲದೆ ಇಲ್ಲಿ ಗಾಳಿಯೂ ಸುಳಿಯಲಾರದು. ಏಕೆ? ತಾವೇ ಅನುಭವ ಪಟ್ಟಿರಲ್ಲ, ನನ್ನ ಅನುಮತಿಯಿಲ್ಲದೆ ತಾವು ಸಹಾ ಒಳಗೆ ಪ್ರವೇಶಿಸಲೂ ಸಾಧ್ಯವಿರಲಿಲ್ಲ.

**ಶಂಕರ**: (ತಲೆದೂಗಿ) ಅದಿರಲಿ, ಆಚಾರ್ಯಾ! ನೀನು ಭೂಲೋಕಕ್ಕೆ ಹೋಗಿ ಬಂದು ರಾಜ್ಯವನ್ನೊಪ್ಪಿಸುವುದರಲ್ಲಿ ಗೂಢವಾಗಿ ಇಟ್ಟಿರುವ ಉದ್ದೇಶ ವಾದರೇನು?

**ಆಚಾರ್ಯ**: ಸರ್ವಜ್ಞ ಮೂರ್ತೀ! ಅದನ್ನೂ ನನ್ನಿಂದಲೇ ತಿಳಿಯಬೇಕೆ?

**ಶಂಕರ**: ಅಹುದಹುದು. ನಿನ್ನಿಂದ ಕೇಳುವುದರಲ್ಲಿಯೇ ಸ್ವಾರಸ್ಯ. ಹೇಳಿಬಿಡು.

**ಆಚಾರ್ಯ**: ಶಂಭೋ! ವಿಶೇಷವೇನೂ ಇಲ್ಲ. ಭೂಲೋಕದವರು ಕೇವಲ ಮಂಕು ಮತಿಗಳು. ಮೂಢ ಭಕ್ತಿಯಲ್ಲಿ ಮುಳುಗಿ ಅಜ್ಞಾನಾಂಧ ಕಾರದಲ್ಲಿ ಚರಿಸುತ್ತಲಿದ್ದಾರೆ. ಇನ್ನು ಮುಂದಾದರೂ ಕಣ್ದೆರದು ನೋಡಿ ವರ್ತಿಸಿರೆಂದು ಹೇಳಿ ಬರುತ್ತೇನೆ.

**ಶಂಕರ**: ಎಷ್ಟು ಮಾರ್ಮಿಕವಾಗಿ ಮಾತನಾಡುತ್ತಿ ಆಚಾರ್ಯ! ವಿವ ರಿಸಿ ಹೇಳಬಾರದೆ.

**ಆಚಾರ್ಯ**: ವಿವರಣೆ ಬೇಕಿದ್ದರೆ ಕೇಳಿ—'ಪವಿತ್ರ ಕ್ಷೇತ್ರವೆಂದೆನಿಸಿಕೊಳ್ಳ ಭರತಖಂಡದಲ್ಲಿ ಅನಾದಿಕಾಲದಿಂದಲೂ ಋಷಿಗಳಿಂದೂ ಮುನಿಗಳಿಂದೂ

ತಪಸ್ವಿಗಳೆಂದೂ ಹಲವಾರು ಕಪಟಿಗಳು ಜನ್ಮತಾಳಿ, ತಮ್ಮ ಜೀವನೋಪಾಯಕ್ಕಾಗಿ, ವೇದಶಾಸ್ತ್ರಪುರಾಣೇತಿಹಾಸಗಳೆಂಬ ಹಲವಾರು ಕಟ್ಟು ಕಥೆಗಳನ್ನು ಬರೆದು, ಅವುಗಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳನ್ನು ಲೇಶಮಾತ್ರವೂ ಅರಿಯದೆ ಜಗನ್ನಿಯಾಮಕರೂ, ಜಗತ್ಪಾಲಕರೂ, ಧರ್ಮಮೂರ್ತಿಗಳೂ, ಅನಾಥ ರಕ್ಷಕರೂ ಎಂಬುದಾಗಿ ಮನಬಂದಂತೆ ಬಣ್ಣಿಸಿರುತ್ತಾರೆ. ಹಾಗೆ ಹೊಗಳಿಸಿಕೊಳ್ಳುವ ಮೂರ್ತಿಗಳು ಕೇವಲ ಕಾಲ್ಪನಿಕವಾದುವುಗಳು. ಬ್ರಹ್ಮಾದಿಗಳನ್ನು ಕಣ್ಣಾರೆಕಂಡು ಮನವರಿಕೆ ಮಾಡಿಕೊಂಡು, ವರ್ಣಿಸಿದವರಾರೂ ಇಲ್ಲ. ಗ್ರಂಥಗಳಲ್ಲಿಯ ದೇವತೆಗಳಿಗೂ ಪ್ರತ್ಯಕ್ಷ ಕಾಣುವ ದೇವತೆಗಳಿಗೂ ಅಜಗಜಾಂತರವಿದೆ. ಓ ಎನ್ನ ಬಂಧುಗಳೇ! ಕೇಳಿ— ನಿಮ್ಮವನೇ ಆದ ನಾನು, ಈ ನಾಲ್ಕಾರು ದಿನಗಳು ನಿಮ್ಮನ್ನಗಲಿ ಹೋಗಿ ಎಲ್ಲ ದೇವತೆಗಳನ್ನು ಪ್ರತ್ಯಕ್ಷವಾಗಿ ಕಂಡು, ಅವರ ಮರ್ಮವನ್ನು ತಿಳಿದು ಬಂದಿದ್ದೇನೆ. ಕೇಳಿ, ಪ್ರತ್ಯಕ್ಷವಾಗಿ ನಾನು ಕಂಡ ನಿಮ್ಮ ಜಗದ್ರಕ್ಷಕನೆನ್ನಿಸಿಕೊಳ್ವ ಶಿವನೊಬ್ಬ ಮಂಕುಮತಿ, ಅಧರ್ಮವರ್ತಿ, ನೀತಿಬಾಹಿರ, ಪಕ್ಷಪಾತಿ, ದೇವತ್ವದ ತಿರುಳಿಲ್ಲದ ಹುಚ್ಚು ಶಿಖಾಮಣಿ. ಕಣ್ದೆರೆದು ನೋಡಿ, ಇನ್ನಾದರೂ ಜಾಗ್ರತೆಗೊಳ್ಳಿ, ಮೋಸಹೋಗಬೇಡಿ; ನಮಗಿಂತಲೂ ಅವರು ಕುಶಾಗ್ರ ಬುದ್ಧಿಗಳಲ್ಲ—ತದ್ವಿರುದ್ಧವಾಗಿ ಕೇವಲ ಮಂದಮತಿಗಳು, ಹೆಡ್ಡರು; ಕಣ್ಮರೆಯಲ್ಲಿದ್ದು ತಮ್ಮೆಲ್ಲ ಹುಳುಕನ್ನೂ ಇದುವರೆಗೂ ಮುಚ್ಚಿಕೊಂಡಿದ್ದರು. ಅವರ ಮಾಯಾಜಾಲಕ್ಕೆ ಸಿಕ್ಕಿ ಬಳಲ ಬೇಡಿ. ಮೊದಲು ನಿಮ್ಮ ವೇದಶಾಸ್ತ್ರಪುರಾಣೇತಿಹಾಸಗಳನ್ನು ಅಗ್ನಿಗಾಹುತಿ ಕೊಡಿ, ವಿಗ್ರಹಗಳನ್ನು ನುಚ್ಚು ನೂರಾಗಿಸಿರಿ, ದೇವಾಲಯಗಳನ್ನು ನೆಲ ಸಮಮಾಡಿರಿ, ದೇವರೆನ್ನುವ ಪದವನ್ನೇ ಉಚ್ಚರಿಸದಿರಿ— ಇದರಿಂದ ನಿಮ್ಮ ಕ್ಷಾಮಡಾಮರಗಳು ತಗ್ಗಿ, ಜನಜೀವನವು ಸುಖಮಯವಾಗುತ್ತದೆ,' ಹೀಗೆಂದು ಒಂದು ಹಿತವಾಕ್ಯವನ್ನು ಹೇಳಿಬಂದು ತಮ್ಮ ರಾಜ್ಯವನ್ನೊಪ್ಪಿಸುತ್ತೇನೆ. ಸ್ವೀಕರಿಸಿ, ಸುಖವನ್ನನುಭವಿಸಿ. ನಾನಿನ್ನು ಹೊರಡುತ್ತೇನೆ. (ಮುನ್ನುಗ್ಗುವನು.)

**ಶಂಕರ:** (ಬೆಚ್ಚಿದವನಂತೆ ನಟಿಸಿ) ಎಲೈ ಆಚಾರ್ಯಾ! ತಡೆ, ತಡೆ,

ಏಕಿಂತು ಆವೇಶಗೊಂಡು ನುಡಿಯುತ್ತೀಯೆ? ತ್ರಿಮೂರ್ತಿಗಳು ಕಾಲ್ಪನಿಕ ಗಳೆ? ಧರ್ಮಬಾಹಿರರೆ? ವೇದಗಳು ಸುಳ್ಳೇ? ನಾವೆಲ್ಲರೂ ಪಕ್ಷಪಾತಿಗಳೇ?

**ಆಚಾರ್ಯ**: ಅಹುದು, ಅಹುದು, ಅಹುದು. ಈಗ ಪ್ರತ್ಯಕ್ಷವಾಗಿಯೇ ಆಯಿತಲ್ಲ. ತಮ್ಮ ನಚ್ಚಿನ ಭೃತ್ಯ, ಅನುಭವಶಾಲಿ, ಸಂಶೋಧಕ ರತ್ನನ ಆಡಳಿತೆಗಿಂತಲೂ ನಮ್ಮ ರಾಜ್ಯಭಾರವೇ ಜನಪ್ರಿಯವಾಗಿದ್ದರೂ ಅವನ ಪಕ್ಷವನ್ನೇ ವಹಿಸಿ ಮಾತನಾಡುತ್ತಲಿರುವಿರಿ. ಮರೆಮೋಸಗಳಿಂದ ನಮ್ಮನ್ನು ಬರಮಾಡಿಕೊಂಡು ಈ ಕಷ್ಟಕ್ಕೆ, ಈ ಮಾನಭಂಗಕ್ಕೆ ಗುರಿಪಡಿಸಿದ ಕಳ್ಳನ, ಸ್ವಾಮಿದ್ರೋಹಿಯ ಪಕ್ಷವನ್ನೇ ವಹಿಸಿ ಮಾತನಾಡುತ್ತಲಿರುವಿರಿ. ಇದಕ್ಕಿಂತಲೂ ಪಕ್ಷಪಾತವು ಬೇರುಂಟೆ? ಇದಕ್ಕಿಂತಲೂ ಅಧರ್ಮವು ಬೇರುಂಟೆ? ನಿಮ್ಮ ಒಂದೊಂದು ವಾಕ್ಯವನ್ನು ನಂಬಿ ಹಲವಾರು ಜನಾಂಗಗಳು ಮಣ್ಣುಪಾಲಾದುವು. ಪವಿತ್ರವಾದ ನಮ್ಮ ನಾಡು ನಿಮ್ಮನ್ನು ನಂಬಿ ಸುಡುವ ಕಾಡಾಗಿದೆ ಇಂದು. ನಂಬಿ ಕೆಟ್ಟ ಕೋತಿ ಭಟ್ಟರು ನಾವು.

**ಶಂಕರ**: ನಂಬಿಕೆಟ್ಟರೆ ಆಚಾರ್ಯ! ಅಂಥಾ ನಮ್ಮ ವಾಗ್ದಾನವಾದರೂ ಯಾವುದು?

**ಆಚಾರ್ಯ**: ಕೇಳಿ, ಕಿವಿದೆರೆದು ಕೇಳಿ—

"ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನ ಮಧರ್ಮಸ್ಯ ತದಾತ್ಮನಂ ಸೃಜಾಮ್ಯಹಂ ॥
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।
ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥"

ಈ ವಾಗ್ದಾನವೊಂದು ಸಾಲದೆ? ಧರ್ಮಕಿನ್ನೂ ಗ್ಲಾನಿಯುಂಟಾಗಿಲ್ಲವೆ? ಅಧರ್ಮವಿನ್ನೂ ಪರಮಾವಧಿಯನ್ನು ಮುಟ್ಟಿಲ್ಲವೇನೊ? ಪಾಪ, ಹಲವಾರು ಅವತಾರಗಳನ್ನು ಮಾಡಿ ಬೇಜಾರುಗೊಂಡು ವಿಶ್ರಾಂತಿಯನ್ನು ಹೊಂದುತ್ತಲಿರಬಹುದು. ಇಲ್ಲವೆ ಈ ವಾಗ್ದಾನವು ಈ ಯುಗಕ್ಕೆ ಅನ್ವಯಿಸುವುದಿಲ್ಲವೇನೊ? ಕೃತ್ರಿಮ, ಮೋಸ.

**ಶಂಕರ**: ಆಚಾರ್ಯಾ! ಇದು ನನ್ನ ವಾಗ್ದಾನವಲ್ಲ.

**ಆಚಾರ್ಯ:** ಅದು ಮುತ್ತಿನಂಥ ಮಾತು. ತಮ್ಮಂಥವರಿಂದಲ್ಲದೆ ಮತ್ತಾರಿಂದಲೂ ಹೇಳಲ್ಪಡದ ಮಾತು!

**ಶಂಕರ:** ಅದೇಕೆ ಆಚಾರ್ಯ?

**ಆಚಾರ್ಯ:** ಕೇಳಿ—

'ಶಿವಾಯ ವಿಷ್ಣು ರೂಪಾಯ ಶಿವರೂಪಾಯ ವಿಷ್ಣುವೇ ।
ಶಿವಸ್ಯ ಹೃದಯಂ ವಿಷ್ಣುಃ ವಿಷ್ಣೋಶ್ಚ ಹೃದಯಂ ಶಿವಃ ॥'

ಎಂದು ಭಾವಿಸಿ, ಭೂಲೋಕದ ಕುರಿಗಳು ನಿಮ್ಮನ್ನು ಜತೆಜತೆಯಾಗಿ ಉಚ್ಚರಿಸುವುದೇನು, ಜತೆ ಜತೆಯಾಗಿ ಪೂಜಿಸುವುದೇನು, ಆರಾಧಿಸುವುದೇನು! ಎಲ್ಲವೂ ಹುಚ್ಚೆಂದು ಕಾಣುತ್ತದೆ. ಹರಿಹರಬ್ರಹ್ಮಾದಿಗಳಲ್ಲಿ ಭೇದವೆಣಿಸಿದವರಿಗೆ ಪ್ರತ್ಯೇಕ ನರಕವೆಂದು ಭಾವಿಸಿವೆ. ಅಜ್ಞಾನದ ಪರಮಾವಧಿ!

**ಶಂಕರ:** ಆಚಾರ್ಯಾ! ಜನರ ಮಾತಿರಲಿ, ನಿನ್ನ ವಿಶ್ವಾಸದ ಬಗ್ಗೆ ಒಂದು ಮಾತನ್ನೂ ಹೇಳಲಿಲ್ಲವೆ?

**ಆಚಾರ್ಯ:** ನಾನು ಆಡಿದ್ದೆಲ್ಲವೂ ನನ್ನ ವಿಶ್ವಾಸದ ಮಾತು. ಶ್ರೀಮನ್ನಾರಾಯಣನೇ ಬ್ರಹ್ಮ ವಿಷ್ಣು ರುದ್ರರೆಂಬ ರೂಪದಿಂದ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುತ್ತಲಿರುವನು. ತೋರುವಿಕೆಗೆ ಮಾತ್ರ ತ್ರಿಮೂರ್ತಿಗಳು ಮೂರು ಕಾರ್ಯಗಳನ್ನು ಹಂಚಿಕೊಂಡಿದ್ದರೂ, ಲೋಕ ಕಲ್ಯಾಣ ಕಾರ್ಯಗಳಲ್ಲಿ ಮೂವರಿಗೂ ಸಮಭಾಗವುಂಟು. ಹೀಗೆಂದು ಅನನ್ಯ ಭಕ್ತಿಯಿಂದ ತಮ್ಮಾರಾಧನೆಯನ್ನೇ ಮಾಡುತ್ತಲಿದ್ದ ನನಗೆ ಈ ತಮ್ಮ ನುಡಿಯು ವಜ್ರಾಘಾತವಾಗಿ ಪರಿಣಮಿಸಿತು. ಹೆಚ್ಚೇನು, ಇದೆಲ್ಲವೂ ನನ್ನ ಭ್ರಮೆಯೋ ಕನಸೋ ಎನ್ನಿಸುತ್ತದೆ. ಹೇಗೂ ಇರಲಿ, ಕೂಡಲೆ ನನ್ನ ಮುಂದಿನ ಕಾರ್ಯವನ್ನು ಕೈಕೊಳ್ಳಲು ನಿರ್ಧರಿಸಿದ್ದೇನೆ. ನಮ್ಮ ನಿಮ್ಮ ಸಂಬಂಧಗಳು ಪೂರ್ಣವಾಗಿ ಹರಿದು ಹೋಗುವ ಮೊದಲು ನನ್ನ ಕೊನೆಯ ನಮಸ್ಕಾರಗಳನ್ನು ಹೃತ್ಪೂರ್ವಕವಾಗಿ ಸಲ್ಲಿಸಿ ಬಿಡುತ್ತೇನೆ. (ನಮಸ್ಕರಿಸುವನು.)

**ಶಂಕರ:** (ಹಸನ್ಮುಖನಾಗಿ) ಕಂದಾ! ಮೇಲಕ್ಕೇಳು. ಸಮಾಧಾನವನ್ನು ಹೊಂದು; ನಿನ್ನನ್ನುದ್ಧರಿಸಲೆಂದೇ ನಾವಿಲ್ಲಿಗೆ ಬಂದುದು. ಬೇಜಾರು ಮಾಡಿಕೊಳ್ಳಬೇಡ. ನಿನ್ನ ಸ್ಥಿರ ಭಕ್ತಿಯನ್ನು ಮೂರು ಲೋಕಕ್ಕೂ ಪ್ರಕ

ಟಿಸಬೇಕೆಂಬ ಉದ್ದೇಶದಿಂದಲೇ ನಾಲ್ಕು ಮಾತುಗಳನ್ನಾಡಿದ್ದೇನೆ. ನಿನ್ನಂಥಾ ಭಕ್ತರನ್ನುದ್ಧರಿಸದಿದ್ದರೆ, ಲೋಕ ಕಲ್ಯಾಣವಾದರೂ ಹೇಗಾಗ ಬೇಕು? ಯಮಧರ್ಮನೊಂದು ಪಾಠವನ್ನು ಕಲಿಯಲು ಸಂದರ್ಭವ ನ್ನುಂಟುಮಾಡಿಕೊಂಡನಷ್ಟೆ. ಯಮ ಧರ್ಮಾ! ಹೀಗೆ ಬಾ. ಆಚಾರ್ಯನನ್ನು ಆಲಿಂಗಿಸು. (ಯಮಧರ್ಮನು ಆಚಾರ್ಯನನ್ನು ಆಲಿಂಗಿಸುವನು.) ಚಿತ್ರ ಗುಪ್ತಾ! ಅನ್ಯಥಾ ಭಾವಿಸ ಬೇಡ. ಎಲ್ಲವೂ ನಮ್ಮ ಲೀಲೆಯಿಂದಲೇ ಆಗ ತಕ್ಕುವು. ಆಚಾರ್ಯಾ! ನೀನಿನ್ನು ನಮ್ಮೊಡನೆ ಕೈಲಾಸಕ್ಕೆ ತೆರಳು. ಅನಂತ ಕಾಲ ಅಲ್ಲಿಯ ಸುಖವನ್ನನುಭವಿಸು.

**ಆಚಾರ್ಯ**: ಧನ್ಯನಾದೆ ತಂದೆ. (ನಮಸ್ಕರಿಸುವನು.)

**ಶಂಕರ**: ಯಮಧರ್ಮಾ! ನಿನ್ನ ರಾಜ್ಯವನ್ನು ನೀನು ಸ್ವೀಕರಿಸು. ಆದರ್ಶ ಪ್ರಭುವಾಗಿ ರಾಜ್ಯಭಾರವನ್ನು ನಡೆಯಿಸು.

**ಯಮ**: ತಂದೆ ಧನ್ಯನಾದೆ. ನಿನ್ನಾಜ್ಞೆಯನ್ನು ಪಾಲಿಸುವುದರಲ್ಲಿಯೇ ನಿರತನಾಗಿರುತ್ತೇನೆ. (ನಮಸ್ಕರಿಸುವನು.)

**ಶಂಕರ**: ಆಚಾರ್ಯಾ! ನಿನ್ನ ಕೋರಿಕೆಗಳೇನಾದರುಂಟೆ?

**ಆಚಾರ್ಯ**: ಪ್ರಭೂ! ನೀನೊಲಿದ ಮೇಲೆ ಇತರ ವಸ್ತುಗಳ ಹಂಬಲ ವಾದರೆಲ್ಲಿ? ಜಗಜ್ಜನನಿ, ಸರ್ವಮಂಗಳೆಯೊಡನೆ ನಿನ್ನ ದರ್ಶನವನ್ನೊಮ್ಮೆ ಒದಗಿಸಿ ಕೊಡು ತಂದೆ.

**ಶಂಕರ**: ಅದೊಂದು ಮಹತ್ಕಾರ್ಯವೆ? ಇಗೋ ಇಲ್ಲಿ ನೋಡು–ಕಲ್ಯಾ ಣಿಯು ನಿನ್ನನ್ನಾಶೀರ್ವದಿಸಲು ಸನ್ನದ್ಧಳಾಗಿರುವಳು.

(ಪಾರ್ವತಿಯು ಪ್ರತ್ಯಕ್ಷಳಾಗುವಳು.)

**ಆಚಾರ್ಯ**: ಮಾತೇ! ಸರ್ವಮಂಗಳೇ! ಕರುಣಿಸಿದೆಯಾ? ನಾನೇ ಧನ್ಯ. (ವಂದಿಸುವನು.)

**ಪಾರ್ವತಿ**: ಕಂದಾ! ಮೇಲಕ್ಕೇಳು. ಚಿರಸುಖಿಯಾಗು.

**ಯಮ**: ತಾಯೇ! ಈ ಕಿಂಕರನ ವಂದನೆಗಳನ್ನು ಸ್ವೀಕರಿಸಿ ಆಶೀರ್ವ ದಿಸು. (ವಂದಿಸುವನು.)

**ಪಾರ್ವತಿ**: ಮಗೂ! ಮೇಲಕ್ಕೇಳು. ಸಕಲ ಕಲ್ಯಾಣಗಳುಂಟಾಗಲಿ.

**ಚಿತ್ರಗುಪ್ತ:** ಜಗನ್ಮಾತೆಗೆ ಅನಂತ ನಮಸ್ಕಾರಗಳು. (ವಂದಿಸುವನು

**ಪಾರ್ವತಿ:** ಸಮಸ್ತ ಮಂಗಳಗಳುಂಟಾಗಲಿ, ಮೇಲಕ್ಕೇಳು.

**ಚಿತ್ರಗುಪ್ತ:** ಧನ್ಯನಾದೆ ಮಾತೆ.

**ಶಂಕರ:** ದೇವೀ! ಕಾಲವಿಳಂಬ ಮಾಡದಂತೆ ಆಚಾರ್ಯನನ್ನೊ ಗೂಡಿ ನಾವೆಲ್ಲರೂ ಕೈಲಾಸಕ್ಕೆ ತೆರಳಿ ಅಲ್ಲಿಯೇ ಆಚಾರ್ಯನಿಗೆ ಅವನ ಪತ್ನಿ ಪುತ್ರರ ಸಮಾಗಮವನ್ನುಂಟುಮಾಡೋಣ.

**ಪಾರ್ವತಿ:** ಪ್ರಭುವಿನಿಷ್ಟದಂತಾಗಲಿ.

— **ಮಂಗಳ** —

[ಅಂಕ ಪರದೆ ಬೀಳುವುದು]



# 1952ರಲ್ಲಿ 'ಸಂಶೋಧನೆ'ಯನ್ನು ಯಶಸ್ವಿಯಾಗಿ ಅಭಿನಯಿಸಿದವರು



ಕುಳಿತವರು ಎಡದಿಂದ ಬಲಕ್ಕೆ

ಶ್ರೀ. ಎನ್. ರಘುನಾಥ ಶೆಟ್ಟಿ (ವಿಕ್ರಮ); ಶ್ರೀ. ಎಂ. ರಾಮಚಂದ್ರ (ಶಂಕರ); ಶ್ರೀ. ಎಂ. ಎನ್. ಪದಕಣ್ಣಯ್ಯ (ಪಾರ್ವತಿ); ಶ್ರೀ. ಎಂ. ಇಂದುಶೇಖರ್ (ಚಲಚಿತ್ರಪ್ರಖ್ಯಾತನಟ) (ಯಮ); ಶ್ರೀ. ಎಂ. ಪಾಂಡುರಂಗರಾವ್ (ಚಂಡ).

ನಿಂತವರು ಎಡದಿಂದ ಬಲಕ್ಕೆ

ಶ್ರೀ. ಬಿ. ಸುಬ್ರಾಯ ಉಡ್ಪ (ದ್ವಾರಪಾಲಕ); ಶ್ರೀ. ಎಸ್. ಹೆಬ್ಬಾರ್ (ಸೇನಾಪತಿ); ಶ್ರೀ. ಪಿ. ಶ್ರೀಪತಿರಾವ್ (ಆಚಾರ್ಯ); ಶ್ರೀ. ರಾಮಚಂದ್ರಕಾರಂತ (ಸೇವಕ); ಶ್ರೀ. ಪಿ. ದೇವರಾವ್ (ಚಿತ್ರಗುಪ್ತ); ಶ್ರೀ. ಕೃಷ್ಣಬಳೆಗಾರ್ (ದ್ವಾರಪಾಲಕ).

ಹೊದಿಕೆಯ ಮುದ್ರಣ ಮತ್ತು ಬ್ಲೋಕ್
ಶಾರದಾ ಛಾಪಖಾನೆ, ಮಂಗಳೂರು ೧.